# ಜಯ! ಪರಾಜಯ

[ಸಾಮಾಜಿಕ ಕಾದಂಬರಿ.]

—: ೦ :—

ಲೇಖಕ:

ಕೈ. ವಾ. ಶಂ. ಅ. ಕುಲಕರ್ಣಿ.

ಪ್ರಕಾಶಕರು

ಭಿ. ಕೃ. ಕಾಳೆ,

ಶ್ರೀ ಶೇಷಾಚಲ ಗ್ರಂಥಮಾಲೆ ಆನಂದವನ-ಅಗಡಿ

—:() ● ():—

೨ನೇ ಮುದ್ರಣ

ಎಪ್ರಿಲ ೧೯೪೦

೧/-

ಬೆಲೆ

# ಮೊದಲನೇ ಮುದ್ರಣದ ವೇದಿಕೆ.

ಸಮಾಜದಲ್ಲಿ ನೀತಿಯ ಕಟ್ಟಡವು ಕ್ರಮೇಣ ಶಿಥಿಲವಾಗುತ್ತ ಬಂದು ಈಗ ಕೇವಲ ಮುರುಕಳಿಗೆ ಬಂದಿದೆ. ಆ ಕಟ್ಟಡದ ಹ್ರಾಸವು ಹೀಗೆಯೇ ಆಗುತ್ತ ನಡೆದರೆ, ಸ್ವಲ್ಪ ದಿವಸಗಳಲ್ಲಿ ಅದು ನಾಮಶೇಷವಾಗುವದೆಂಬದರಲ್ಲಿ ಸಂಶಯುವಿಲ್ಲ. ಯಾವ ದೇಶದಲ್ಲಿ ನೀತಿಯ ಸಾಮ್ರಾಜ್ಯವು ಪ್ರಶಸ್ಥವಾಗಿ ಪ್ರಸ್ಥಾಪಿತವಾಗಿತ್ತೋ, ಅಥವಾ ಯಾವ ದೇಶವು ನೀತಿಗೆ ತವರುಮನೆಯಾಗಿರುವದೋ, ಆ ದೇಶದಲ್ಲಿ ನೀತಿಯ ಗಂಧವು ಕೂಡ ನಾಮಶೇಷವಾಗುವದೆಂದರೆ, ಇದಕ್ಕಿಂತಲೂ ಹೆಚ್ಚಿನ ಲಾಂಛನ ಸಂಗತಿಯು ಇನ್ನಾವದಿರುವದು? ಇದು ಕೇವಲ ನಾಚಿಕೆಗೇಡಿತನವು! ಈ ನೀತಿಮಾರ್ಗವನ್ನತಿಕ್ರಮಿಸಿ ನಡೆಯುವ ಮನುಜರಿಗೆ ಧಿಃಕಾರವಿರಲಿ!!

ಇಂಥ ಪರಿಸ್ಥಿತಿಯಲ್ಲಿ ಸಮಾಜದಲ್ಲಿರುವ ಅನೀತಿ ಜನರಿಗೆ ನಾಚಿಕೆ ಹುಟ್ಟುವ ಹಾಗೆ ಕಥಾ-ಕಾದಂಬರಿಗಳನ್ನೂ, ಪ್ರಬಂಧಗಳನ್ನೂ ಬರೆದು, ಅಂಶತಃ ಆದರೂ ಅವರ ಅನಾಚರಣೆಯು ಕಡಿಮೆಯಾಗುವಂತೆ ಪ್ರಯತ್ನಿಸುವದು ವಿವೇಕಶಾಲಿಗಳಾದವರ ಕರ್ತವ್ಯವು. ತಿಳಿದೂ ತಿಳಿದೂ ದುಷ್ಕರ್ಮ ಮಾಡುವವರನ್ನು ಹಾದಿಗೆ ತರುವದು ಅಶಕ್ಯವೆಂಬುದು ನಿಶ್ಚಿತವಾಗಿದ್ದರೂ, ಇಂಥ ಪ್ರಯತ್ನಗಳಿಂದ ನೂರರಲ್ಲಿ, ಕಿಂಬಹುನಾ ಸಾವಿರದಲ್ಲಿ ಒಬ್ಬನಿಗಾದರೂ ಹೇಯಬುದ್ಧಿ ಉಂಟಾಗದೆ ಇರದು! ಬುದ್ಧಿವಾದವನ್ನು ಹೇಳುವದು ವಿವೇಕಸಂಪನ್ನರ ಕರ್ತವ್ಯವಾದ್ದರಿಂದ, ಫಲವು ಬರುವದಿಲ್ಲೆಂದು ಅವರು ತಮ್ಮ ಕರ್ತವ್ಯವನ್ನು ಬಿಡದಿರುವದೇ ಶ್ರೇಯಸ್ಕರವು.

ಇನ್ನು ಈ ವಿಷಯುವನ್ನು ಬರೆಯುವಾಗ ಒಂದು ಮಹತ್ವದ ಸಂಗತಿಯನ್ನು ಸ್ಮರಣೆಯಲ್ಲಿಟ್ಟುಕೊಳ್ಳಬೇಕಾಗುತ್ತದೆ. ಲೇಖನ ವ್ಯವಸಾಯವನ್ನು ಕೈಕೊಂಡವರಲ್ಲಿ ಅನೇಕ ಉದ್ದೇಶಗಳಿರುತ್ತವೆ. ಕೆಲವರಿಗೆ ದ್ರವ್ಯಸಂಪಾದನೇಚ್ಛೆಯಿರಬಹುದು; ಕೆಲವರಿಗೆ ಕೀರ್ತಿಯ ಮಹತ್ವಾಕಾಂಕ್ಷೆಯಿರಬಹುದು; ಕೆಲವರಿಗೆ ಸಮಾಜೋದ್ಧಾರದ ಕಳಕಳಿ ಇರಬಹುದು. ಕೆಲವರಿಗೆ ಕನಿಷ್ಟಪಕ್ಷಕ್ಕೆ ತಮಗಾದರೂ ಅನೀತಿಯಲ್ಲಿ ಹೇಯಬುದ್ಧಿಯುಂಟಾಗಬೇಕೆಂಬ ಸದಿಚ್ಛೆ ಇರಬಹುದು; ಇನ್ನೂ ಅನಂತ ಉದ್ದೇಶಗಳಿರಬಹುದು; ಆದರೆ ಇವುಗಳಲ್ಲಿ ಸಮಾಜ ಉದ್ಧಾರದ ಉದ್ದೇಶವನ್ನು ಚಂದ್ರಿಕೆಯು ಮನಃಪೂರ್ವಕವಾಗಿ ಇಚ್ಛಿಸುವಳು. ಇದೇ ಉದ್ದೇಶದಿಂದಲೇ ಪ್ರಸ್ತುತದ ಕಾದಂಬರಿಯನ್ನು ಪ್ರಕಟಿಸಲಾಗಿದೆ. ಇದಕ್ಕೆ ಮಿ. ಶಂಕರರಾಯರಂಥ ಯೋಗ್ಯ ಲೇಖಕರು ದೊರೆತದ್ದರಿಂದ ಕಾದಂಬರಿಯು ಜನತೆಯಲ್ಲಿ ಈ

ಬಗೆಯ ದೌರ್ಜನ್ಯವನ್ನು ಹೋಗಲಾಡಿಸಲು ಅಂಶತಃ ಆದರೂ ಕಾರಣ ವಾದೀತೆಂದು ನಂಬುತ್ತೇನೆ.

ಈ ಕಾದಂಬರಿಯಲ್ಲಿ ಚಂದ್ರಿಕೆ ಹಾಗು ಶಾಮರಾಯ ಇವೆರಡೇ ಪಾತ್ರ ಗಳು ಪ್ರಾಮುಖ್ಯವಾಗಿರುವವು. ನಿಜವಾದ ಬೋಧವನ್ನು ಇವರಿಬ್ಬರಿಂದಲೆ ತೆಗೆದುಕೊಳ್ಳಬೇಕಾಗಿದೆ. ಶ್ರೀಮಂತ ತರುಣರು ಸುಂದರ ತರುಣಿಯರನ್ನು ನೋಡಿ, ಮೋಹಿಸಿ, ಆದರಲ್ಲೂ ಅವರು ಒಂದು ಪಕ್ಷ ಕಡಿಮೆಯಾದವರಿದ್ದರೆ, ಅವರನ್ನು ಹಿಡಿಕೆಯಲ್ಲಿ ಹಿಡಿಯಲು, ಹೇಗೆ ಹೊಂಚು ಹಾಕುತ್ತಾರೆಂಬದು ಶಾಮರಾಯನ ಕಾರಸ್ಥಾನದಿಂದ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ; ಆದರೆ ಆರ್ಯಸ್ತ್ರೀಯರ ಶೀಲವನ್ನು ಮನಮುಟ್ಟಿ ಪಾಲಿಸುವ ಚಂದ್ರಿಕೆಯಂಥವರು ಶಾಮರಾಯನ ವೈಭವಕ್ಕೆ ಮನಸೋಲದೆ ಇರುವದು ಸ್ತ್ರೀಜಾತಿಗೇ ಆದರ್ಶ ಪ್ರಾಯವಾಗಿದೆ. ಇದರಿಂದ ಸಿದ್ಧವಾಗತಕ್ಕ ಅಂಶವೇನಂದರೆ:—ಧರ್ಮ ವನ್ನು ಕಾಯುವ ಹಾಗು ಶೀಲಕ್ಕನುಸಾರವಾಗಿ ನಡೆಯುವ ಸದ್ಬುದ್ಧಿಯಿದ್ದರೆ, ಇನ್ನೂ ಸ್ತ್ರೀಯರಲ್ಲಿಯೇ ಇರುತ್ತದೆಂದು ಹೇಳಬಹುದು. ಇಂಥ ಶೀಲ ವುಳ್ಳ ಕುಲಸತಿಯರನ್ನು ಹಲವು ಜಾಲಗಳಿಂದ ಕಟ್ಟಿ ಅವರ ಶೀಲವನ್ನು ಕೆಡಿಸುವವರು ಪುರುಷಾಧಮರೆಂದು ಕರೆಯಬಹುದು. ಇಂಥ ಪುರುಷಾ ಧಮರು ಹೆಚ್ಚಿರುವವರೆಗೆ ದೇಶಕ್ಕೆ ಕ್ಷೇಮವೆಂತಾಗುವದು? ಯಾಕಂದರೆ ಕುಲ ಸತಿಯರ ಮಂಗಲಾಶೀರ್ವಾದಗಳನ್ನು ಪಡೆಯುವ ಬದಲು ಅವರ ಶಾಪವನ್ನು ಪದರಿನಲ್ಲಿ ಕಟ್ಟಿಕೊಳ್ಳುವವರೇ ಹೆಚ್ಚಾದ ಬಳಿಕ ಸುಖಕ್ಕೆ ದಾರಿಯೆಲ್ಲಿಯದು? ನಮ್ಮ ಸುಶಿಕ್ಷಿತ ತರುಣ ಬಂಧುಗಳು ಇತ್ತ ಲಕ್ಷ್ಯಗೊಡಬೇಕು. ದೇಶದ ಪರಿಸ್ಥಿತಿಯನ್ನು ಮನದಂದು ಅದರ ಉದ್ಧಾರದ ಕಡೆಗೆ ಮನಸ್ಸು ಹಾಕ ಬೇಕಲ್ಲವೆ, ಕುಲಸತಿಯರ ಕಡೆಗೆ ಮನಸ್ಸು ತಿರುಗಿಸಿ, ತಾವು ಅಧೋಗತಿಗೆ ಪಾತ್ರರಾಗುವದಲ್ಲದೆ, ದೇಶವನ್ನೂ ರಸಾತಳಕ್ಕೆ ಮುಟ್ಟಿಸಬಹುದು. ಲೇಖ ಕರ ಆಶಯವಾದರೂ ಇದೇ ಇರುವದು.

ಸಜ್ಜನ ವಿಧೇಯ,

ಆರ್. ಟಿ. ಕಪೂರ.

---

# ಜಯ! ಪರಾಜಯ



## [೧]




ಳಿಗಾಲದ ದಿವಸ; ಐದೂವರೆ ಗಂಟೆಯಾಗುತ್ತಲೆ ಸೂರ್ಯಾಸ್ತವಾಗುವದು. ಗೋವಿಂದರಾಯನು ಆಫೀಸಿನಿಂದ ಮನೆಗೆ ಬಂದು, ಅವಸರದಿಂದ ಉಪಹಾರ ತೀರಿಸಿಕೊಂಡು ಹೊರಹೊರಡುವದಕ್ಕೆ ಸಿದ್ಧನಾದನು. ಪತಿಯು ಆಫೀಸಿನಿಂದ ಬಂದಾಗಲೇ ಮುಖವು ಚಿಂತಾಗ್ರಸ್ತವಾಗಿರುವದನ್ನು ಹೆಂಡತಿಯಾದ ರಮಾಬಾಯಿಯು ಕಂಡುಕೊಂಡಿದ್ದಳು; ಮತ್ತು ಫಲಾಹಾರದ ತರುವಾಯ ಕಾರಣವನ್ನು ವಿಚಾರಿಸಬೇಕೆಂದು ಮಾಡಿಕೊಂಡಿದ್ದಳು. ಮನೆಯಿಂದ ಹೊರಬೀಳಲು ತಯಾರಾದ ಗಂಡನನ್ನು ನೋಡಿ, ಅವಳು ಯಾವದೋ ಒಂದು ಅಶುಭ ಸಂಗತಿಯು ಜರುಗಿದೆಯೆಂದು ನಿಶ್ಚಯಿಸಿಕೊಂಡಳು; ಯಾಕಂದರೆ, ಗೋವಿಂದರಾಯನು ಸಾಯಂಕಾಲದ ತರುವಾಯ-ಅದರಲ್ಲೂ ಚಳಿಗಾಲದ ರಾತ್ರಿಯಲ್ಲಿ ಎಂದೂ ಮನೆಬಿಟ್ಟು ಹೊರಟವನಲ್ಲ.

“ಮೋರೆಯು ಬಾಡಿದೆ; ಏನಾಗಿದೆ ಹೇಳಿರಿ ನೋಡೋಣ? ಈ ರಾತ್ರಿಯಲ್ಲಿ ಹೊರಬೀಳುವದರಲ್ಲಿರುವಿರಿ!” ರಮಾಬಾಯಿಯು ಕೇಳಿದಳು.

ವ್ಯಾಕುಲಗೊಂಡ ಗೋವಿಂದರಾಯನು ಹೇಳಿದನು:—“ಚಂದ್ರಿಕೆಯ ಅತ್ತೆಯ ಮನೆಗೆ ಹೋಗಿ ಬರಬೇಕಾಗಿದೆ. ಮುಂಜಾನೆ ಆಫೀಸಿಗೆ ಹೋಗುವಾಗ್ಗೆ ಚಂದ್ರಿಕೆಯ ಮಾವನ ಪತ್ರವು ನನ್ನ ಕೈಸೇರಿತು. ಇಗೋ, ಇಲ್ಲಿರುವದು, ನೋಡಿಕೋ.”

“ನೀವೇ ಓದಿ ಹೇಳಿಬಿಡಿರಲ್ಲ?” ರಮಾಬಾಯಿಯು ಅಂದಳು. ಗೋವಿಂದರಾಯನು ಪತ್ರವನ್ನು ಓದಿದನು. ಅದರಲ್ಲಿ ಹೀಗೆ ಬರೆದಿತ್ತು:—

“ಯಾವನು ತನ್ನ ಮನೆತನಕ್ಕೆ ಹತ್ತಿದ ಕಲಂಕವನ್ನು ಬಚ್ಚಿಟ್ಟು, ಸದ್ಗೃಹಸ್ಥರೊಡನೆ ಸಂಬಂಧ ಬೆಳಿಸಿ, ಅವರನ್ನು ಕುಲಗೆಡಿಸುವನೋ, ಅವನು ಬ್ರಾಹ್ಮಣನಾಗಿದ್ದರೂ ಬ್ರಾಹ್ಮಣೇತರನೆಂದೇ ನಾನು ತಿಳಿಯುತ್ತೇನೆ!

ಅಬ್ರಾಹ್ಮಣನ ಮಗಳಿಗೆ ನಮ್ಮ ಮನೆಯಲ್ಲಿ ಸ್ಥಳವಿಲ್ಲ! ನಾನು ನಿನ್ನ ಮಗಳನ್ನು ನನ್ನ ಮಗನಿಗೆ ತಕೊಂಡು ಜಾತಿಭ್ರಷ್ಟನಾಗಿದ್ದೇನೆ! ವಿಧಿವತ್ ಪ್ರಾಯಶ್ಚಿತ್ತವನ್ನು ಹೊಂದಿ, ಪುನಃ ಕುಲದಲ್ಲಿ ಸೇರುವೆನು. ಇಂದಿನಿಂದ ನಿನ್ನ ಮಗಳು ನನ್ನ ಸೊಸೆಯಲ್ಲ; ನಾನು ಆದಷ್ಟು ಬೇಗ ಮಗನಿಗೆ ಬೇರೊಂದು ಮದುವೆ ಮಾಡತಕ್ಕವನಿದ್ದೇನೆ. ನೀನು ಇಂದು ಸಾಯಂಕಾಲದಲ್ಲಿ ಬಂದು, ನಿನ್ನ ಮಗಳನ್ನು ಕಟ್ಟಿಕೊಂಡು ಹೋಗು; ಇಲ್ಲವಾದರೆ ನಾನೇ ಸೇವಕನೊಡನೆ ನಿನ್ನ ಮಗಳನ್ನು ನಿನ್ನ ಮನೆಗೆ ಕಳುಹಿಕೊಡುವೆನು."

ಗೋವಿಂದರಾಯನ ಮಗಳಾದ ಚಂದ್ರಿಕೆಯೊಡನೆ ಸ್ವಾಮಿರಾಯನ ವಿವಾಹವಾಗಿ ಎರಡು ವರ್ಷಗಳಾಗಿದ್ದವು; ಚಂದ್ರಿಕೆಯು ವಾಡಿಕೆಯಂತೆ ಹಕ್ಕಿನಿಂದ ಅತ್ತೆಯ ಮನೆಯನ್ನು ಸೇರಿ ಸುಮಾರು ಆರು ತಿಂಗಳಾಗಿದ್ದವು. ಸ್ವಾಮಿರಾಯನ ತಂದೆಯಾದ ಶಿವರಾಯನು ವಿಲಕ್ಷಣ ಸ್ವಭಾವದ ಮನುಷ್ಯನಾಗಿದ್ದನು. ಶರೀರಸಂಬಂಧವನ್ನು ಬಳಿಸಿದ ತರುವಾಯದಲ್ಲಿ ಶಿವರಾಯನು ಗೋವಿಂದರಾಯನ ಕಲಂಕದ ವಾರ್ತೆಯ ಸುದ್ದಿಯನ್ನು ಕೇಳಿದನು. ಅದರ ನಿಜತ್ವವನ್ನು ಗೊತ್ತುಮಾಡಿಕೊಳ್ಳುವದಕ್ಕಾಗಿ ಶೋಧ ನಡೆಸಿದನು. ಇಂದು ಮುಂಜಾವಿನಲ್ಲಿ ಶಿವರಾಯನಿಗೆ ನಿಶ್ಚಿತವಾದ ಸುದ್ದಿಯು ತಿಳಿಯಿತು. ಕೂಡಲೆ ಬೀಗನಿಗೆ ಪತ್ರ ಬರೆದು ಅದನ್ನು ಸೇವಕನ ಕೈಯಲ್ಲಿ ಕೊಟ್ಟು ಕಳುಹಿದನು; ಗೋವಿಂದರಾಯನು ಹೆಂಡತಿಗೆ ಓದಿ ತೋರಿಸಿದ ಪತ್ರವು ಇದೇ. ರಮಾಬಾಯಿಯು ಪತ್ರದ ಅಭಿಪ್ರಾಯವನ್ನರಿತು ಕಳವಳಗೊಂಡಳು.

ಗೋವಿಂದರಾಯನ ಅಜ್ಜನ ಜನನದ ಬಗ್ಗೆ ಒಂದು ಕಥೆಯು ಜನರಲ್ಲಿ ಪ್ರಚಾರವಾಗಿತ್ತು. ಒಂದು ಕಾಲದಲ್ಲಿ ಈ ಕಥೆಯನ್ನೆತ್ತಿ ಹಳ್ಳಿಯ ಜನರು ದೊಡ್ಡ ಚಳವಳಿಯನ್ನೆಬ್ಬಿಸಿದ್ದರು. ಈ ಕಾರಣದಿಂದ ಗೋವಿಂದರಾಯನ ತಂದೆಯು ಸ್ವಗ್ರಾಮವಾಸಕ್ಕೆ ಶರಣುಹೊಡೆದು, ಮುಂಬಯಿಯಲ್ಲಿ ಮನೆಮಾಡಿದನು. ಮುಂಬಯಿಯಲ್ಲಿ ಏಕತ್ರಿತವಾದ ಸಮಾಜವಿಲ್ಲ; ಅರ್ಥಾತ್ ಸಾಮಾಜಿಕ ಸಂಗತಿಯನ್ನೆತ್ತಿ ಬಹಿಷ್ಕಾರದ ಬಂಡಾಯವನ್ನೆಬ್ಬಿಸುವ ಜನರಿಲ್ಲ. ಎಲ್ಲ ತರದ ಜನರನ್ನು ಹೊಟ್ಟೆಯಲ್ಲಿ ಹಾಕಿಕೊಂಡು, ಅವರೆಲ್ಲರಿಗೆ ಶಾಂತಿಯನ್ನು ಕೊಡಬಲ್ಲ ಈ ಶತಮಾನದ ಮುಂಬಯಿ ಕ್ಷೇತ್ರದಲ್ಲಿ ಬಂದ ಬಳಿಕ ಗೋವಿಂದರಾಯನೂ, ಅವನ ತಂದೆಯೂ ನಿಶ್ಚಿಂತರಾದರು.

ಮುಂದೆ ಎಷ್ಟೋ ದಿವಸಗಳವರೆಗೆ ಆ ಕಲಂಕದ ಕಥೆಯು ಅದೃಶ್ಯವಾಗಿ ಉಳಿಯಿತು; ಆದರೆ ಗೋವಿಂದರಾಯನ ಲಗ್ನದ ಕಾಲದಲ್ಲಿ ಮತ್ತೆ ತಲೆಯೆತ್ತುವದಕ್ಕಲ್ಲದ್ದಿತು. ಗೋವಿಂದರಾಯನ ಮಾವನು ಈ ಸಂಗತಿಯನ್ನು

ಕಿಪಯ ಮೇಲೆ ಹಾಕಿಕೊಳ್ಳಲಿಲ್ಲ. ಅಂದಿನಿಂದ ಇಂದಿನವರೆಗೆ ಗೋವಿಂದ ರಾಯನು ಮತ್ತೆ ಜನರ ಪೀಡೆಯನ್ನು ಅನುಭವಿಸಬೇಕಾಗಿ ಬಂದಿರಲಿಲ್ಲ; ಆದರೆ ಇಂದಿನ ಶಿವರಾಯನ ಪತ್ರದಲ್ಲಿ ಆ ಕಲಂಕದ ಕಥೆಯು ಗರ್ಭಿತ ವಾಗಿತ್ತು.

ಚಿಂತಾನ್ವಿತಳಾದ ರಮಾಬಾಯಿಯು:"ಇದಕ್ಕೆ ನೀವೇನು ಅನ್ನುವಿರಿ?" ಎಂದು ಕೇಳಿದಳು.

"ಶಿವರಾಯನಿಗೆ ತಿಳಿಸಿ ಹೇಳುವೆನು. ಅವನ ಮನಸ್ಸಿನ ಸಂದೇಹವನ್ನು ಹೋಗಲಾಡಿಸುವದಕ್ಕೆ ಸಾಧ್ಯವಿರುವಷ್ಟು ಪ್ರಯತ್ನ ಮಾಡುವೆನು.''

''ಚಂದ್ರಿಕೆಯನ್ನು ಕರೆತರುವಿರಾ?''

"ಕರೆದುಕೊಂಡು ಬರುವ ಮನಸ್ಸು ನನಗಿಲ್ಲ; ಆದರೆ ಶಿವರಾಯನು ನನ್ನ ಮಾತು ಕೇಳದಿದ್ದರೆ, ಆಸಿರ್ವಾಹದಿಂದ ಹುಡುಗೆಯನ್ನು ಕರೆದುಕೊಂಡು ಬರುವೆನು."

''ಬೇಡ; ಏನಾದರೂ ಕರೆತರಬೇಡಿರಿ. ಇಂದು ಚಂದ್ರಿಕೆಯು ನಮ್ಮ ಮನೆಗೆ ಬಂದರೆ, ಮುಂದೆ ಅವಳು ಅತ್ತೆಯ ಮನೆಗೆ ಹೋಗದಂತಾಗುವಳು. ಮುಚ್ಚಿ ಹೋಗಹತ್ತಿದ್ದ ಕಲಂಕದ ಸುದ್ದಿಯು ಮತ್ತೆ ಬಲವಾಗಿ ತಲೆಯೆತ್ತು ವದು. ಮತ್ತೊಂದು ಮಾತೆಂದರೆ, ನೀವು ಮಾತುಮಾತಿಗೆ ಸಿಟ್ಟಿಗೇಳುವಿರಿ; ಆದರೆ ಈ ಹೊತ್ತಿನಲ್ಲಿ ಹಾಗೆ ಮಾಡಬೇಡಿರಿ. ಶಿವರಾಯನ ಸಂಗಡ ಸಮಾ ಧಾನದಿಂದ ಮಾತನಾಡಿರಿ. ಮಗಳನ್ನು ಹಡೆದಬಳಿಕ ಬಗ್ಗಿ ನಡೆಯಲೇ ಬೇಕು."

ಗೋವಿಂದರಾಯನು ಹೆಂಡತಿಯ ಕಡೆಗೆ ಸಿಟ್ಟಿನಿಂದ ನೋಡಿ ಅಂದದ್ದು: ''ಅದೇಕೆ? ಮಗಳ ತಂದೆಯಾದರೇನಾಯಿತು? ಆತ್ಮಮರ್ಯಾದೆಯನ್ನು ಮೀರುವದಕ್ಕಾದೀತೇ?''

ಇನ್ನು ಮಾತು ಬೆಳಸುವದು ತರವಲ್ಲವೆಂದು ರಮಾಬಾಯಿಯು ತಿಳಿ ದಳು. ಪತಿಯು ಮನೆಯಿಂದ ಹೊರಡುವಾಗಲೇ ಕೋಪಗೊಂಡು ಹೋದರೆ, ಮುಂದಿನ ಪರಿಣಾಮವು ಒಳಿತಾಗುವದಿಲ್ಲವೆಂದು ಅವಳಿಗೆ ಗೊತ್ತಿತ್ತು. ಕಾರಣ ಅವಳು ಬೇರೆ ಮಾತನಾಡದೆ ಸುಮ್ಮನಾದಳು. ಗೋವಿಂದರಾಯನು ಮನೆಯಿಂದ ಹೊರಬಿದ್ದು ನಡೆದನು.



# ( ೨ )

ಶಿವರಾಯನು ಪ್ರಾಚೀನ ಆಚಾರ ವಿಚಾರ ಅಭಿಮಾನಿಯಾಗಿದ್ದರೂ ಚಹಾರಾದಿ ಚತುರ್ದಶ ರತ್ನಗಳಲ್ಲಿಯ ಚಹಾ-ಚಂಚಿಗಳ ಮೋಹದಿಂದ ಪಾರಾಗಿರಲಿಲ್ಲ. ಮುನ್ನಿನ ಜನರಿಗೆ ಈ ವಸ್ತುಗಳು ದೊರೆಯದಿದ್ದುದರಿಂದಲೇ ಅವರು ಇವುಗಳ ಸೇವನೆಯನ್ನು ಬಿಟ್ಟಿದ್ದರೇ ಹೊರತು, ಶಾಸ್ತ್ರನಿಷಿದ್ಧವಸ್ತುಗಳೆಂದು ಇವುಗಳಿಗೆ ಬಹಿಷ್ಕಾರವಿಕ್ಕಿದವರಲ್ಲವೆಂದು ಶಿವರಾಮನು ಪ್ರತಿಪಾದಿಸುತ್ತಿದ್ದನು. ಚಹಾ-ತಂಬಾಕಗಳು ಗಿಡಗಳ ಸೊಪ್ಪುಗಳಾದುದರಿಂದ ಶಾಕಾಹಾರಿಗಳಾದ ಭಾರತೀಯರು ತ್ಯಾಜ್ಯವಾದವುಗಳೆಂದು ಇವುಗಳನ್ನು ತಿರಸ್ಕರಿಸುವದು ತಕ್ಕದ್ದಲ್ಲವೆಂದೂ, ಇವನ್ನು ಸೇವಿಸಬಾರದೆಂದು ಹೇಳುತ್ತಿರುವ ಹಲವರು ಶುದ್ಧಮೂರ್ಖರೆಂದೂ ಶಿವರಾಯನ ಖಂಡಿತವಾದ ಮತವಾಗಿತ್ತು. ಜಗತ್ತಿನೊಳಗಿನ ಪ್ರತಿಯೊಂದು ವಸ್ತುವು ಹಲವರಿಗೆ ಅಪ್ರಿಯವಾಗಿರುವಂತೆ ಚಹಾ-ತಂಬಾಕಗಳಾದರೂ ಕೆಲವರಿಗೆ ಬೇಡಾಗಿರುವದು ಸ್ವಾಭಾವಿಕವೆಂದು ಅವನು ಆಗಾಗ್ಗೆ ಅನ್ನುತ್ತಿದ್ದನು; ಮತ್ತು ಈ ಸೊಪ್ಪುಗಳ ನಿಸ್ಸೀಮ ಭಕ್ತನಾಗಿ, ಮೇಲಿಂದ ಮೇಲೆ ಸೇವಿಸಿ, ಸ್ವರ್ಗಸುಖವನ್ನನುಭವಿಸುವದರಲ್ಲಿ ತಲ್ಲೀನನಾಗಿರುತ್ತಿದ್ದನು!

ಶಿವರಾಯನು ಪಡಸಾಲೆಯಲ್ಲಿಯ ಹಾಸಿಗೆಯ ಮೇಲೆ ಲೋಡಿಗೆ ಆತುಕೊಂಡು ಕುಳಿತಿದ್ದನು. ನೆರೆಮನೆಯ ಭೀಮರಾಯನು ಹತ್ತರವಲ್ಲಿಯ ಬೇರೊಂದು ಲೋಡಿಗೆ ಹೊಂದಿಕೊಂಡು ಕುಳಿತಿದ್ದನು. ನಡುವೆ ಚಂಚಿಯು ಬಿದ್ದುಕೊಂಡಿತ್ತು. ಇವರ ಉಪವಸ್ತುಗಳು ಅಲ್ಲಲ್ಲಿ ಬಿದ್ದಿದ್ದವು. ಒಳಗೆ ಚಹದ ಸಿದ್ಧತೆ ನಡೆದಿತ್ತು. ತಂಬಾಕದ ಉಗುಳಿನ ಭಾರದಿಂದಲೋ ಮತ್ತೇತರಿಂದಲೋ ಇಬ್ಬರ ಬಾಯಿಗಳೂ ಮುಚ್ಚಿದ್ದವು.

ತುಸಹೊತ್ತಿನ ಮೇಲೆ ಶಿವರಾಯನು ಎದ್ದು ಹೋಗಿ ಉಗುಳಿ ಬಂದು "ರಾಯರೇ, ಬೀಗರ ಮನೆಯ ಕಲಂಕದ ಕಥೆಯನ್ನು ತಿಳಿದೂ ತಿಳಿದೂ ಸೊಸೆಯನ್ನು ಮನೆಯಲ್ಲಿಟ್ಟುಕೊಳ್ಳಲಿಕ್ಕಾದೀತೆ? ನೀವೇ ಹೇಳಿರಿ." ಎಂದು ಭೀಮರಾಯನನ್ನು ಕೇಳಿದನು. ಭೀಮರಾಯನು ಮಾತಾಡದೆ ಸುಮ್ಮನಿದ್ದನು. ಶಿವರಾಯನು ಮತ್ತೆ ಇಂತು ಕೇಳಿದನು:—"ಯಾಕೆ, ಮಾತಾಡಲೊಲ್ಲಿರಿ. ನೀವಾಗಿದ್ದರೆ ಸುಮ್ಮನಿರುತ್ತಿದ್ದಿರಾ?"

ಭೀಮರಾಯನು ತುಸಹೊತ್ತು ಸುಮ್ಮನಿದ್ದು ಭಾರವಾದ ಬಾಯಿ

ಯಿಂದ ಹೇಳಿದನು: "ನೀವು ಅನ್ನುತ್ತಿರುವದು ನಿಜವು; ಆದರೆ ಹುಡುಗೆಯು ಸಲುವಾಗಿ ಯಾರಿಗಾದರೂ ದುಃಖವಾಗುವಂತಿದೆ."

ಶಿವರಾಯನು ಎದ್ದು ಕುಳಿತು ಆವೇಶದಿಂದ ಅಂದದ್ದು: "ಅದಕ್ಕೆ ಮಾಡುವದೇನು? ಒಬ್ಬನ ದೋಷದಿಂದ ಬೇರೊಬ್ಬನು ಕಷ್ಟವನ್ನನುಭವಿಸ ಬೇಕಾಗುವದು ಸಂಸಾರದ ನಿಯಮವೇ ಆಗಿದೆ!"

ಭೀಮರಾಯನು ಪ್ರತಿ ಮಾತಾಡಲಿಲ್ಲ. ಶಿವರಾಯನು ಭೀಮರಾಯನ ಉತ್ತರವನ್ನು ಕೇಳುವದರಲ್ಲಿ ಆತುರನಾಗಿದ್ದನು. ಈ ಸಮಯದಲ್ಲಿ ಗೋವಿಂದ ರಾಯನು ಬಂದು ವಿನಯದಿಂದ ನಮಸ್ಕಾರ ಮಾಡಿದನು. ಶಿವರಾಯನು ತಿರುಗಿ ನಮಸ್ಕರಿಸಲಿಲ್ಲ; ಮಾತಾಡಲಿಲ್ಲ. ದೂರದಲ್ಲಿರುವ ಕುರ್ಚಿಯನ್ನು ತೋರಿಸಿ ಕುಳಿತುಕೊಳ್ಳುವಂತೆ ಸಂಕೇತ ಮಾಡಿದನು. ಗೋವಿಂದರಾಯನು ಕುಳಿತುಕೊಂಡನು.

"ವಾಹನವನ್ನು ತಕ್ಕೊಂಡು ಬಂದಿರುವೆಯಾ?" ಶಿವರಾಯನು ಬೀಗ ನನ್ನು ಕೇಳಿದನು.

"ಇಲ್ಲ" ಗೋವಿಂದರಾಯನು ವಿನಯದಿಂದಲೇ ಹೇಳಿದನು.

"ಅದೇಕೆ? ನಾನು ಮೊದಲೇ ತಿಳುಹಿದ್ದೆನಲ್ಲ!"

ಗೋವಿಂದರಾಯನಿಗೆ ಏನು ಮಾತಾಡಬೇಕೆಂಬದು ತಿಳಿಯಲಿಲ್ಲ. ಅವನು ಭೀಮರಾಯನ ಮೋರೆಯ ಕಡೆಗೆ ನೋಡಿದನು. ಭೀಮರಾಯನು ಈ ನೋಟದ ಇಂಗಿತವನ್ನರಿತು ಹೊರಡುವದಕ್ಕೆ ಸಿದ್ಧನಾದನು. ಶಿವ ರಾಯನು ಅವನನ್ನು ಏಳಗೊಡದೆ ಅಂದದ್ದು:—"ನೀವು ಏಳುವ ಕಾರಣವಿಲ್ಲ. ಕುಳಿತುಕೊಳ್ಳಿರಿ. ಸಂಕೋಚಕ್ಕೆ ಆಸ್ಪದವಿಲ್ಲ. ಇದು ಅಂತಃಪುರವಲ್ಲ. ರಾಜ ಕಾರಣದ ಆಲೋಚನೆಯ ಗುಪ್ತ-ಗೃಹವೂ ಅಲ್ಲ! ಮುಚ್ಚಿಟ್ಟು ಮಾತಾಡುವ ದೇನೂ ಇಲ್ಲ! ಎಲ್ಲವೂ ನಿಮ್ಮ ಸಮಕ್ಷವೇ ಆಗಲೆಂದು ಈ ರಾತ್ರಿಯಲ್ಲಿ ನಿಮ್ಮನ್ನು ಬುದ್ಧಿಪೂರ್ವಕವಾಗಿ ಕರೆಸಿದ್ದೇನೆ."

ಒಳಗಿನಿಂದ ಚಹವೂ ಅದರ ಸಾಹಿತ್ಯಗಳೂ ಬಂದವು. ಶಿವರಾಯನು ಹಾಸಿಗೆ ಬಿಟ್ಟು ಬಂದು, ಕಿಟ್ಲಲಿಯಿಂದ ಕಪ್ಪಿಗೆ ಚಹವನ್ನು ಸುರುವಿ ಭೀಮ ರಾಯನನ್ನು ಕರೆದನು. ಭೀಮರಾಯನು ಮೊದಲು ಚಹವನ್ನು ಗೋವಿಂದರಾ ಯನಿಗೆ ಕೊಡುವಂತೆ ಸೂಚಿಸಿದನು. ಶಿವರಾಯನು ಹಾಗೆ ಮಾಡದಿರುವದನ್ನು ನೋಡಿ, ಭೀಮರಾಯನು ಎದ್ದು ಬಂದು, ಚಹ ತುಂಬಿದ ಕಪ್ಪು-ಬಸಿಗಳನ್ನು ಗೋವಿಂದರಾಯನ ಕೈಯಲ್ಲಿ ಕೊಡಹೋದನು. ಶಿವರಾಯನು ಅದಕ್ಕೆ ಬಲ ವಾದ ತಡೆಯನ್ನುಂಟು ಮಾಡಿ :'ನಮ್ಮ ಮನೆಯಲ್ಲಿ ಜಾತಿಭ್ರಷ್ಟರ ಚಹಾ

ಪಾನಕ್ಕೆ ಅವಕಾಶವಿಲ್ಲ." ಎಂದು ಸ್ಪಷ್ಟವಾಗಿ ಹೇಳಿಬಿಟ್ಟನು. ಭೀಮರಾಯನಿಗೆ ಬಹಳ ಕೆಡಕೆನಿಸಿತು. ಶಿವರಾಯನು ಆಗ್ರಹದಿಂದ ಹೇಳಿದರೂ ಚಹ ತಕ್ಕೊಳ್ಳದೆ ಭೀಮರಾಯನು ಮೊದಲಿನ ಸ್ಥಳಕ್ಕೆ ಹೋಗಿ ಕುಳಿತನು; ಶಿವರಾಯನು ಚಹಾಪಾನ ಮಾಡಿ ತನ್ನ ಆಸನವನ್ನಲಂಕರಿಸಿದನು.

ಗೋವಿಂದರಾಯನ ಹೃದಯಕ್ಕೆ ಕಾಸಿದ ಕುಡದಿಂದ ಬರೆಕೊಟ್ಟಂತಾಯಿತು. ಆದರೂ ಅವನು 'ಕನ್ಯಾಪಿತನು ತಗ್ಗಿ ನಡೆಯಲೇ ಬೇಕು' ಎಂಬ ಹೆಂಡತಿಯ ಮಾತನ್ನು ನೆನೆದು, ಉಕ್ಕುತ್ತಿರುವ ಕೋಪವನ್ನು ತಡೆದುಕೊಂಡು ಸುಮ್ಮನಿದ್ದನು. ಶಿವರಾಯನು ಗೋವಿಂದರಾಯನ ಕಡೆಗೆ ವಕ್ರದೃಷ್ಟಿಯನ್ನಿರಿಸಿ ವ್ಯಂಗ್ಯಸ್ವರದಿಂದ :"ವಾಹನವನ್ನು ತರಲೇ ಇಲ್ಲವೇ? ಮಗಳನ್ನು ನಡೆಸಿಕೊಂಡು ಹೋಗುವಿಯಾ? ದುಡ್ಡಿನ ಉಳಿತಾಯಕ್ಕಾಗಿ ಹೀಗೆ ಮಾಡಿರಬಹುದು! ನಿನ್ನಂತೆ ನಮಗೆ ಮಾಡಲಿಕ್ಕೆ ಬಾರದು!" ಎಂದು ಅಂದು, ಸೇವಕನನ್ನು ಕೂಗಿ, ಟಾಂಗೆಯನ್ನು ತಕ್ಕೊಂಡು ಬರುವಂತೆ ಅಪ್ಪಣೆ ಮಾಡಿದನು.

ಗೋವಿಂದರಾಯನ ವ್ಯಥಿತ ಹೃದಯಕ್ಕೆ ಮತ್ತೊಂದು ಬಲವಾದ ಆಘಾತವು ತಾಕಿತು. ಕೋಪವು ಹೆಚ್ಚಾಯಿತು. ಹೃದಯಹೀನ ಶಿವರಾಯನ ಮನೋರಂಜನೆಗೆ ಇನ್ನು ಸವಿಮಾತುಗಳನ್ನಾಡಿ ಉಪಯೋಗವಿಲ್ಲೆಂದು ಅವನಿಗೆ ಅನಿಸಿತು; ಆದರೆ ದುರ್ದೈವಿಯಾದ ಮಗಳ ಮಮತೆಯು ಮುಖವನ್ನು ಸ್ಮರಿಸಿ, ಕೇವಲ ಅವಳ ಹಿತಕ್ಕೋಸುಗ ಶಿವರಾಯನನ್ನು ಸಮಾಧಾನಪಡಿಸುವದಕ್ಕೆ ಒಮ್ಮೆ ಪ್ರಯತ್ನ ಮಾಡಿ ನೋಡಬೇಕೆಂದು ಸಂಕಲ್ಪ ಮಾಡಿಕೊಂಡನು. ಪರಗೃಹಸ್ಥನಾದ ಭೀಮರಾಯನು ಅಲ್ಲಿರುವದರಿಂದ ಗೋವಿಂದರಾಯನಿಗೆ ತುಂಬಾ ಸಂಕೋಚವೆನಿಸಿತು; ಆದರೆ ಉಪಾಯವಿರಲಿಲ್ಲ. ಅವನು ಮುಖದಲ್ಲಿ ಸಿಟ್ಟಿನ ಲಕ್ಷಣಗಳನ್ನೇನೂ ತೋರಗೊಡದೆ ಶಾಂತರೀತಿಯಿಂದ ಹೇಳಹತ್ತಿದನು:—"ನೋಡಿರಿ, ನಿಮ್ಮ ಪತ್ರದಿಂದ ನಮಗೆ ಅತ್ಯಂತ ದುಃಖವಾಗಿದೆ. ಆಕಾಶದ ಕೊಡಲಿಯು ತಲೆಯ ಮೇಲೆ ಕಳಚಿ ಬಿದ್ದಂತಾಗಿದೆ. ನಿಮಗೆ ಹತ್ತಿದ ಸುದ್ದಿಯು ಸರ್ವಥೈವ ಸುಳ್ಳು! ನಮ್ಮ ಶತ್ರುವು ನಮ್ಮನ್ನು ಸಂಕಟಕ್ಕೊಳಗುಮಾಡುವದಕ್ಕೆ ಆ ಸುದ್ದಿಯನ್ನು ಹರಡಿದ್ದಾನೆ! ತಮ್ಮಂತಹ ಸುಜ್ಞಜನರು...."

ಗೋವಿಂದರಾಯನನ್ನು ಮಾತಾಡಗೊಡದೆ, ಶಿವರಾಯನು ಹೇಳತೊಡಗಿದನು: "ನನ್ನ ಸುಜ್ಞತೆಯ ವಿಷಯದಲ್ಲಿ ನಿನಗೆ ಸಂದೇಹವಿಲ್ಲವಷ್ಟೆ? ಹೇಳುತ್ತೇನೆ ಕೇಳು. ನಾನು ನನ್ನ ಕರ್ತವ್ಯದಲ್ಲಿ ಶಿಥಿಲತೆಯನ್ನೆಂದೂ ತೋರಿಸಿದವನಲ್ಲ! ಆ ಸುದಿ ಹತ್ತಿ ಒಂದು ತಿಂಗಳಾದರೂ ಇದುವರೆಗೆ ನಿನ್ನ ಮುಂದೆ

ಚಕಾರಶಬ್ದವನ್ನಾದರೂ ನಾನು ತೆಗೆದಿರಲಿಲ್ಲ; ಯಾಕಂದರೆ, ಹಾರಿಕೆಯ ಸಂಗತಿಯು ವಿಚಾರಾಂತ್ಯದಲ್ಲಿ ಸಟಿಯಾದರೆ, ನಿನಗೆ ನಿರರ್ಥಕ ತಾಪಕೊಟ್ಟಂತಾಗುವದೆಂದೂ, ಹಾಗೆ ಆಗಬಾರದೆಂದೂ ನನ್ನ ಮನಸ್ಸಿನಲ್ಲಿತ್ತು; ನಾನು ವಿಶೇಷ ರೀತಿಯಿಂದ ಅನುಸಂಧಾನ ನಡೆಸಿದೆನು. ಐದಾರು ಜನರು ನಿನ್ನ ಊರಿಗೆ ಹೋಗಿ ಬಂದರು. ಅವರೆಲ್ಲರು ನಿನ್ನ ಅಜ್ಜನ ವಿಷಯದಲ್ಲಿ ಒಂದೇ ವಿಧವಾದ ಸುದ್ದಿಯನ್ನು ತಂದಿದ್ದಾರೆ."

"ಗ್ರಾಮದಲ್ಲಿ ನನ್ನ ಶತ್ರುಗಳಿಗೆ ಕೊರತೆಯಿಲ್ಲ. ಅವರು ನನ್ನ ಮೇಲೆ ವ್ಯರ್ಥವಾಗಿ ಅಪವಾದ ಹೊರಿಸಿದ್ದಾರೆ." ಗೋವಿಂದರಾಯನು ಹೇಳಿದನು.

ಶಿವರಾಯನು ಉಪಹಾಸಸೂಚಕ ನಗುವನ್ನು ನಕ್ಕು:-"ಆ ಸಂಭಾವಿತ ಗೃಹಸ್ಥರೆಲ್ಲರು ನಂಬಿಗೆಗೆ ತಕ್ಕವರಲ್ಲ! ನೀನೊಬ್ಬನು ಮಾತ್ರ ವಿಶ್ವಾಸಾರ್ಹನು!" ಎಂದಂದನು.

ಗೋವಿಂದರಾಯನಿಗೆ ಒತ್ತಿ ಬರುತ್ತಿರುವ ಕೋಪವನ್ನು ತಡೆಯುವದು ಅಸಾಧ್ಯವಾಯಿತು. ಅವನು ಸಿಟ್ಟಿನಿಂದ ಇಂತು ಹೇಳಿದನು:- "ಹಾಗಾದರೆ, ನಾನು ಸಂಭಾವಿತನಲ್ಲವೇನು? ............ ..."

ಶಿವರಾಯನು ದೃಢಸ್ವರದಿಂದ ಅಂದದ್ದು:—"ಈ ವಿಷಯದಲ್ಲಿ ಇನ್ನೂ ನಿನಗೆ ಸಂಶಯವಿದೆಯೇ? ಯಾವನು ತಾನು ಕುಲಗೇಡಿಯಾಗಿ ಈ ರೀತಿ ಅನ್ಯರ ಕುಲಗೆಡಿಸಲಿಕ್ಕೆ ಯತ್ನಿಸುವನೋ, ಅವನಿಗೆ ಸಂಭಾವಿತನೆನ್ನಬೇಕೆ? ನಾನು ನಿನ್ನ ಮನೆಯಿಂದ ಕನ್ಯೆಯು ತಕ್ಕೊಂಡೆನೆಂದು ಒಳಿತಾಯಿತು! ನಾನು ನಿನ್ನ ಮನೆಗೆ ಮಗಳನ್ನು ಕೊಟ್ಟಿದ್ದರೆ ಹೇಗಾಗುತ್ತಿತ್ತು ನೋಡು! ನನ್ನ ಉದ್ಧಾರದ ಆಶೆಯಿತ್ತೆ? ಕುರುಬ ಕುಂಬಾರರಿಗೂ ಸಭ್ಯಗೃಹಸ್ಥರೆನ್ನಬಲ್ಲೆನು; ಆದರೆ ನಿನಗೆ ಮಾತ್ರ ಅನ್ನಲಾರೆನು!"

ಈ ಸಂಭಾಷಣವನ್ನು ಕೇಳುವುದು ಭೀಮರಾಯನಿಗೆ ಅಸಹ್ಯವಾಯಿತು. ಅವನು ನಡುವೇ ಬಾಯಿಹಾಕಿ ಅಂದದ್ದು:—"ಶಿವರಾಯರೇ, ವ್ಯರ್ಥವಾಗಿ ಮಾತು ಬೆಳೆಸಿ ಉಪಯೋಗವಿಲ್ಲ. ನೀವು ನಿಮ್ಮ ಮನಸ್ಸಿನಲ್ಲಿರುವಂತೆ ಮಾಡೇಮಾಡುವಿರಿ. ಅದರೊಡನೆ ಸಭ್ಯಗೃಹಸ್ಥರ ವಿಶೇಷ ಅಪಮಾನವನ್ನು.."

ಶಿವರಾಯನು ಮುಂದೆ ಮಾತಾಡಗೊಡದೆ ಸಿಟ್ಟಿನಿಂದ ಅಂದದ್ದು:— "ಭೀಮರಾಯರೇ, ನೀವು ತಪ್ಪುತ್ತಿರುವಿರಿ! ಸಂಭಾವಿತರ ಮಾನರಕ್ಷಣೆಯು ಹೇಗೆ ಮಾಡಬೇಕೆಂಬುದನ್ನು ಈ ಶಿವರಾಯನು ಚನ್ನಾಗಿ ಅರಿತಿದ್ದಾನೆ! ಸಭ್ಯ ಗೃಹಸ್ಥರನ್ನು ತನ್ನ ಮನೆಗೆ ಕರೆಸಿಕೊಂಡು ಅವರಿಗೆ ಅಪಮಾನ ಮಾಡುವದಕ್ಕೆ ನಾನೇನೂ ಅಂತಿಂಥ ಮನುಷ್ಯನಲ್ಲ! ಆದರೆ......."

"ಶಿವರಾಯರೇ, ನಾನು ನಿಮ್ಮ ಸಂಗಡ ವಾದ ಮಾಡಬೇಕೆಂದು ನಿಮಗೆ ಹಾಗೆ ಅಂದವನಲ್ಲ. ನೀವು ಸುಮ್ಮನಾಗಬೇಕೆಂಬುದೇ ನನ್ನ ಉದ್ದೇಶವಾಗಿತ್ತು" ಭೀಮರಾಯನಂದನು.

ಶಿವರಾಯನ ದುರ್ವಚನಗಳ ಕಠೋರ ಆಘಾತಗಳಿಂದ ಗೋವಿಂದರಾಯನ ಮನಸ್ಸು ಬಂಡಾಯ ಹೂಡುವದಕ್ಕೆ ಅಣಿಯಾಗಿತ್ತು. ಒಂದು ಕಡೆಯಲ್ಲಿ ಶಿವರಾಯನ ದುರ್ವ್ಯವಹಾರ, ಇನ್ನೊಂದು ಕಡೆಯಲ್ಲಿ ಮಗಳ ಅನಿಷ್ಟದ ಆಶಂಕೆ ಇವೆರಡುಗಳ ಸೆಳೆತದಿಂದ ಗೋವಿಂದರಾಯನ ಮನಸ್ಸು ಕಳವಳಗೊಂಡಿದ್ದರೂ ಉಪಾಯಹೀನವಾಗಿತ್ತು; ಆದರೆ ಯಾವುದಕ್ಕಾದರೂ ಮಿತಿಯಿದ್ದೇ ಇದೆಯಷ್ಟೆ? ಶಿವರಾಯನ ವಾಗ್ಬಾಣಗಳು ಕ್ರಮಶಃ ತೀಕ್ಷ್ಣವಾಗುತ್ತ ನಡೆದಿದ್ದವು. ಇನ್ನು ಇವುಗಳ ಹೊಡೆತಗಳನ್ನು ಸಹಿಸುವದಕ್ಕೆ ಗೋವಿಂದರಾಯನ ಮನಸ್ಸು ಸಿದ್ಧವಿರಲಿಲ್ಲ. ಅದು ಇನ್ನು ಉಗ್ರರೂಪವ ತಾಳಿ ಏಳತಕ್ಕದ್ದು; ಆದರೆ ಇಷ್ಟರಲ್ಲಿ ಭೀಮರಾಯನ ಸಹಾನುಭೂತಿ ಸೂಚಕ ಮಾತಿನಿಂದ ಮತ್ತೆ ನಮ್ರವಾಯಿತು. ಉಗೆಯು ಅತಿವೇಗದಿಂದ ಬಾಯಲರನ್ನು ಒಡೆದು ಹಾರುವದರಲ್ಲಿತ್ತು; ಆದರೆ ಅಷ್ಟರಲ್ಲಿ ಅದರ ಒಂದು ಬದಿಯಲ್ಲಿ ಒಂದು ಸಣ್ಣ ತೂತು ಮಾಡಿಕೊಟ್ಟದ್ದರಿಂದ ಉಗ್ರ-ಉಗಿಯು ಆ ಮಾರ್ಗದಿಂದ ಕೆಲವೊಂದು ಪ್ರಮಾಣದಿಂದ ಹೊರಗೆ ಹೋದದ್ದರಿಂದ ಅಪಘಾತವು ತಡೆಯಿತು. ಗೋವಿಂದರಾಯನು ಮತ್ತೆ ಪುತ್ರಿಯ ಹಿತದ ಕಡೆಗೆ ದೃಷ್ಟಿಯಿಟ್ಟು ಹೇಳಿದನು:—"ರಾಯರೇ, ನನ್ನನ್ನು ಅಸಭ್ಯನೆಂದೇ ತಿಳಿಯಿರಿ. ನಾನು ಒಂದು ಸಂಗತಿಯನ್ನು ಮುಚ್ಚಿಟ್ಟು ನಿಮ್ಮ ಬಳಿಯಲ್ಲಿ ಅಪರಾಧಿಯಾಗಿರುವೆನು; ಆದರೆ ಅದರಲ್ಲಿ ನನ್ನ ಮಗಳದೇನೂ ದೋಷವಿಲ್ಲ. ಅವಳನ್ನೇಕೆ ಹೊರದೂಡುವಿರಿ? ಅವಳ ವಿಷಯದಲ್ಲಿ ದಯದೋರಿರಿ."

"ಒಬ್ಬನು ತಪ್ಪು ಮಾಡುವನು; ಆದರ ಪ್ರಾಯಶ್ಚಿತ್ತವನ್ನು ಇನ್ನೊಬ್ಬನು ಅನುಭೋಗಿಸಬೇಕಾಗುವದು, ಇದು ಪ್ರಪಂಚದ ನಿಯಮವೇ ಆಗಿರುವದು. ನೀನು ನನ್ನನ್ನು ಮೋಸಗೊಳಿಸಲೆಳಿಸದೆ, ಅನುರೂಪ ಸಮಾಜದಲ್ಲಿ ಶರೀರ ಸಂಬಂಧ ಬಳೆಸಿದ್ದರೆ, ನಿನ್ನ ಮಗಳಿಗೆ ಈ ತರದ ದುಃಖದ ಪ್ರಸಂಗವು ಬರುತ್ತಲೇ ಇರಲಿಲ್ಲ. ನಿನ್ನ ಮಗಳಿಗೆ ಕಷ್ಟವಾಗುವದೆಂಬ ಕಾರಣದಿಂದ ನಾವು ಧರ್ಮತ್ಯಾಗಿಗಳಾಗಲಿಕ್ಕೆ ಬರಲಾರದು!" ಶಿವರಾಯನೆಂದನು.

ಗೋವಿಂದರಾಯನು ತಪ್ತನಾಗಿ ಹೇಳಿದನು:—"ನೀವು ನನ್ನ ನಿರಪರಾಧಿನಿಯಾದ ಮಗಳ ಸರ್ವನಾಶಮಾಡಿ, ಧರ್ಮದ ಹೆಸರಿನಿಂದ ಮಹಾ

ಅಧರ್ಮವನ್ನು ಮಾಡುತ್ತಿರುವಿರಿ; ನೀವಿದರ ಪ್ರಾಯಶ್ಚಿತ್ತವನ್ನು ಒಂದಿಲ್ಲೊಂದು ದಿನ ಅನುಭವಿಸಿದಲ್ಲದೆ ತೀರದು!''

ಶಿವರಾಯನು ಹುಬ್ಬುಗಂಟಿಕ್ಕಿ ವಿಕೃತಸ್ವರದಿಂದ ಹೇಳಿದ್ದು:--''ನಾವು ಪ್ರಾಯಶ್ಚಿತ್ತವನ್ನು ತೆಗೆದುಕೊಳ್ಳಲೇಬೇಕು! ಆದರೆ ನೀವು ಹೇಳಿದ ಕಾರಣಕ್ಕಾಗಿ ಮಾತ್ರ ಅಲ್ಲ! ನಿಮ್ಮ ಮಗಳು ನಿರಪರಾಧಿನಿಯಾದರೆ, ವೇಶ್ಯೆಯ ಮಗಳ ದೋಷವಾದರೂ ಯಾವದು? ಅವಳು ಸ್ವಬುದ್ಧಿಯಿಂದ ಯಾವ ಪಾಪವನ್ನೂ ಆಚರಿಸಿರುವದಿಲ್ಲವಲ್ಲ. ಅಂದಬಳಿಕ ವಾರಾಂಗನೆಯ ಕನ್ಯೆಯನ್ನು ಉಚ್ಚವರ್ಣದವರು ಯಾಕೆ ಮದುವೆ ಮಾಡಿಕೊಳ್ಳಬಾರದು?''

ಶಿವರಾಯನ ಈ ತರ್ಕದ ಮಾತಿನಲ್ಲಿ ಗೋವಿಂದರಾಯನ ಹೆಂಡತಿಯ ವಿಷಯದಲ್ಲಿ ಪ್ರತ್ಯಕ್ಷ ದೋಷಾರೋಪವೇನೂ ಇರಲಿಲ್ಲ; ಆದರೆ ಗೋವಿಂದರಾಯನು ವಿಕೃತ ಅರ್ಥವನ್ನು ಗ್ರಹಿಸಿ ಅತ್ಯಂತ ಕೋಪಗೊಂಡನು. ಇದುವರೆಗೆ ಹತ್ತಿಡುತ್ತ ಬಂದಿದ್ದ ಅವನ ಕೋಪಾನಲವು ಮೇಲಿನ ತಡೆಯನ್ನು ಹಾರಿಸಿ ಒಗೆದು, ತಾಂಡವನೃತ್ಯಮಾಡತೊಡಗಿತು. ಗೋವಿಂದರಾಯನು ಮಗಳ ಹಿತಾಹಿತಗಳನ್ನು ಮರೆದುಬಿಟ್ಟನು. ಉನ್ಮತ್ತನಂತೆ ಕಣ್ಣುಗಳನ್ನು ಕೆಂಪಗೆ ಮಾಡಿ ಹೇಳಿದನು:--''ನನ್ನ ಮಗಳು ನಿನ್ನಂತಹ ಹೊಲೆಯನ ಮನೆಯಲ್ಲಿರುವದಕ್ಕಿಂತ ನನ್ನ ಮನೆಯಲ್ಲಿರುವದೇ ಮೇಲು! ನಾನು ಇಂದಿನಿಂದ ನನ್ನ ಮಗಳು ವಿಧವೆಯಾದಳೆಂದು ತಿಳಿಯುವೆನು. ಮಂಗಳಸೂತ್ರವನ್ನು ನನ್ನ ಕೈಯಿಂದ ಹರಿದೊಗೆಯುವೆನು! ನಿನ್ನಂಥ ಚಂಡಾಲನ ಮುಖದರ್ಶನ ಮಾಡುವದೂ ಮಹಾ ಪಾಪಕರವು!''

ಶಿವರಾಯನು ಎದ್ದು ಕುಳಿತನು. ಗೋವಿಂದರಾಯನನ್ನು ಬಿರಿಬಿರಿ ನೋಡುತ್ತ ಹೇಳಿದನು.''ನಮ್ಮ ಮನೆಗೆ ಬಂದು, ನಮ್ಮ ಅಪಮಾನ ಮಾಡುವ ಸಾಹಸವನ್ನು ಕೈಕೊಂಡೆಯಾ? ನಿಲ್ಲು! ಈಗಲೇ ಇದರ ಪರಿಣಾಮವನ್ನು ತೋರಿಸಿಕೊಡುವೆನು!!'' ಶಿವರಾಯನು 'ಬೀರಾ, ಬೀರಾ' ಎಂದು ಸೇವಕನನ್ನು ಕೂಗಿದನು. ಹೊರಗಿದ್ದ ಸೇವಕನು ಒಳಗೆ ಬಂದು, ಒಡೆಯನ ಅಪ್ಪಣೆ ಪಾಲಿಸುವದಕ್ಕೆ ಸಿದ್ಧನಾದನು.

''ಶಿವರಾಯರೆ, ಇದೇನು ಹುಡುಗಾಟಿಗೆ ನಡೆಸಿದಿರಿ? ಇದು ನಿಮಗೆ ಉಚಿತವಲ್ಲ!'' ಎಂದು ಭೀಮರಾಯನು ವ್ಯಗ್ರತೆಯಿಂದ ನುಡಿದನು. ಶಿವರಾಯನು ಈ ಮಾತು ಕಿವಿಯ ಮೇಲೆ ಹಾಕಿಕೊಳ್ಳದೆ, ಸೇವಕನನ್ನು ಕುರಿತು 'ಈ ಕತ್ತೆಯನ್ನು ಹೊರದೂಡು' ಎಂದು ಆಜ್ಞಾಪಿಸಿ, ಗೋವಿಂದರಾಯನನ್ನು ತೋರಿಸಿದನು.

ಗೋವಿಂದರಾಯನು ಆಸನವನ್ನು ಬಿಟ್ಟು, ಎದ್ದು ನಿಂತು, ಕೈಯಲ್ಲಿಯ ಬಡಿಗೆಯನ್ನು ಮೇಲಕ್ಕೆತ್ತಿ ಬೀರನನ್ನು ಉರಿಗಣ್ಣಿನಿಂದ ನೋಡುತ್ತ "ಎಚ್ಚರಿಕೆ! ಒಂದು ಹೆಜ್ಜೆ ಮುಂದೆ ಬಂದರೆ ಗತಿ ನೆಟ್ಟಗಾಗಲಿಕ್ಕಿಲ್ಲ!" ಎಂದು ಗದ್ದರಿಸಿದನು.

ಬೆಕ್ಕಿಗಿಂತ ನಾಯಿಯ ಶಕ್ತಿಯು ಅಧಿಕವಾದದ್ದು, ಎಂಬದರ ಅರಿವು ಬೆಕ್ಕಿಗೂ ಇರುವದು; ಆದರೆ ನಿರುಪಾಯಾವಸ್ಥೆಯಲ್ಲಿಯ ಬಿಡಾಲವು ಮುಂದಿನ ಕಾಲುಗಳನ್ನೆತ್ತಿ ವಿಕೃತಮುಖದಿಂದ ವಿಚಿತ್ರ ಶಬ್ದ ಮಾಡಹತ್ತಿತೆಂದರೆ, ಶ್ವಾನಕ್ಕೆ ತನ್ನ ಶಕ್ತಿಯ ವಿಷಯದಲ್ಲಿ ಸಂದೇಹವುಂಟಾಗುವಂತೆ, ಗೋವಿಂದರಾಯನು ಗಟ್ಟಿಯಾಗಿ ನಿಂತುದನ್ನು ನೋಡಿ ಶಿವರಾಯನ ಬೆದರಿದನು; ಬೀರನೂ ಭಯಗೊಂಡನು ಶಿವರಾಯನು ತನ್ನ ಅಪ್ಪಣೆಯು ಅನುಚಿತವಾದುದೆಂಬದನ್ನರಿತನು. ಬೀರನು ಒಡೆಯನ ಆದೇಶಪಾಲನೆಗೋಸುಗ ಸಂಕಟಗ್ರಸ್ತನಾಗಲಿಕ್ಕೆ ಮುಂದರಿಯದಾದನು. ಗೋವಿಂದರಾಯನು ಮೊದಲು ಯಾರ ಮೇಲೆ ಬಡಿಗೆಯನ್ನು ಬೀಸಬೇಕೆಂಬ ವಿಚಾರದಲ್ಲಿದ್ದನೋ, ಹೇಗೋ ಎಂಬದನ್ನು ನಾವರಿಯೆವು: ಆದರೆ ಇಷ್ಟರಲ್ಲಿ ೯-೧೦ ವರ್ಷಗಳ ವಯಸ್ಸಿನ ಸುಂದರ ಬಾಲಿಕೆಯು ಒಳಗಿಂದ ಹೊರಗೆ ಬಂದು 'ಅಪ್ಪಾ' ಎಂದಂದಳು. ಗೋವಿಂದರಾಯನು ತನ್ನ ಪ್ರಿಯಪುತ್ರಿಯನ್ನು ನೋಡಿ, ಬಡಿಗೆಯನ್ನು ಬಿಸುಟಿ, 'ಮಗು, ಬೇಗ ನಡೆ ಈ ನರಕಗೃಹದಲ್ಲಿ ಕ್ಷಣಕಾಲ ಸಹ ನಿಲ್ಲುವಂತಿಲ್ಲ!' ಎಂದಂದು ಮಗಳನ್ನು ತಬ್ಬಿಕೊಂಡು ಮನೆಯಿಂದ ಹೊರಬಿದ್ದನು. ಶಿವರಾಯನ ಸೇವಕನು ಹೊರಗೆ ಟಾಂಗೆಯನ್ನು ತಂದು ನಿಲ್ಲಿಸಿದ್ದನು. ಗೋವಿಂದರಾಯನು ಟಾಂಗೆಯನ್ನು ಹತ್ತಿಕೊಂಡು ಮಗಳೊಡನೆ ಮನೆಗೆ ನಡೆದನು.

ಗೋವಿಂದರಾಯನು ಹತ್ತಿಕೊಂಡು ಹೋಗುತ್ತಿದ್ದ ಟಾಂಗೆಯ ಸಪ್ಪಳವನ್ನು ಕೇಳಿ, ಶಿವರಾಯನು ಲೋಡಿಗೆ ಆತುಕೊಂಡು ಕುಳಿತು ಸಮಾಧಾನದ ಉಸಿರ್ಗರೆದು 'ಪೀಡೆಯು ದೂರಾಯಿತು! ನಿಶ್ಚಿಂತನಾದೆನು!' ಎಂದು ಅಂದುಕೊಂಡನು. ಭೀಮರಾಯನು ಹೊರಡುವದಕ್ಕೆ ಎದ್ದು ನಿಂತನು. ಶಿವರಾಯನು ಇವನನ್ನು ಕುರಿತು "ಏಕೆ, ಇಷ್ಟರಲ್ಲಿಯೇ ಹೊರಟಿರಲ್ಲ? ಕುಳಿತು ತಂಬಾಕ ಹಾಕಿಕೊಳ್ಳಿರಿ" ಎಂದು ಅಂದನು.

"ಒಲ್ಲೆನು; ರಾತ್ರಿಯು ಬಹಳವಾಗಿದೆ." ಎಂದಂದು ಭೀಮರಾಯನು ಹೊರಹೊರಟನು.

೩

ಚಂದ್ರಿಕೆಯು ಅತ್ತೆಯ ಮನೆಯಿಂದ ಬಹಿಷ್ಕೃತಳಾದ ಐದಾರು ದಿವಸಗಳ ತರುವಾಯ, ಒಂದು ದಿನ ಇಳಿಹೊತ್ತಿನಲ್ಲಿ ಸ್ವಾಮಿರಾಯನು ಅಂತಸ್ತಿನ ಮೇಲಿನ ತನ್ನ ಕೋಣೆಯಲ್ಲಿ ಕುಳಿತು ಉದಾಸಭಾವದಿಂದ ಬಾಹ್ಯದೃಶ್ಯವನ್ನು ನೋಡುತ್ತಲಿದ್ದನು. ಇಪ್ಪತ್ತನೇ ಶತಮಾನದ ಹಿಂದುಸ್ಥಾನದ ಒಂದು ನಗರದ ರಾಜಮಾರ್ಗವದು. ಕೋಲಾಹಲಕ್ಕೆ ಪರಿಮಿತಿಯಿರಲಿಲ್ಲ. ಟ್ರಾಮು ಗಾಡಿಗಳ ಸುಳಿದಾಟ; ಮೋಟಾರಗಳ ಓಡಾಟ; ಟಾಂಗೆ-ಕಾಲುಗಾಡಿಗಳ ಗಂಟೆಗಳ ಶಬ್ದ; ಜನರ ಪರಿಭ್ರಮಣ ಹಾಗು ಕಲಹದ ನೋಟ! ಆದರೆ ಇವೆಲ್ಲವುಗಳ ಕಡೆಗೆ ಸ್ವಾಮಿರಾಯನ ಸಂಪೂರ್ಣ ದೃಷ್ಟಿಯಿರಲಿಲ್ಲ. ತೋರಿಕೆಯಲ್ಲಿ ಅವನು ಹೊರಗಡೆ ನೋಡುತ್ತಿದ್ದನಾದರೂ, ಹೃದಯದಲ್ಲಿಯ ವಿಚಾರತರಂಗವು ಪ್ರಬಲವಾದ ದುಃಖವನ್ನೊಡ್ಡಿ, ಅವನಿಗೆ ತಾಪವನ್ನು ಕೊಡುತ್ತಲಿತ್ತು. ಅವನು ತನ್ನ ವರ್ತಮಾನಕಾಲದ ಅವಸ್ಥೆಯನ್ನು ಮನದಂದು, ಭೂತಕಾಲದ ಸ್ಥಿತಿಯನ್ನು ಪರ್ಯಾಲೋಕಿಸತೊಡಗಿದನು.

ಸ್ವಾಮಿರಾಯನು ತಾಯಿ-ತಂದೆಗಳ ಏಕಮಾತ್ರ ಪುತ್ರನಾಗಿದ್ದರೂ, ಸ್ನೇಹಕ್ಕಿಂತ ಕಠೋರ ಶಾಸನವನ್ನೇ ಹೆಚ್ಚಾಗಿ ಅನುಭವಿಸುತ್ತ ಬಂದಿದ್ದನು. ಯಾಕಂದರೆ, ಇವನು ಬಾಲ್ಯದಲ್ಲಿಯೇ ತಾಯಿಯನ್ನು ಕಳೆದುಕೊಂಡಿದ್ದನು. ನಿಷ್ಠುರನಾದ ತಂದೆಯು ಅಚ್ಛೆಗೆ ಆಸ್ಪದ ಕೊಡತಕ್ಕವನಾಗಿರಲಿಲ್ಲ. ಶಿವರಾಯನ ಮನೆಯಲ್ಲಿ ಬೇರೆ ಹೆಂಗಳೆಯರಿರಲಿಲ್ಲ. ಸ್ವಾಮಿರಾಯನಿಗೆ ಅಕ್ಕ-ತಂಗಿಯರೂ ಇದ್ದಿಲ್ಲ; ಅದರಿಂದ ಶಿವರಾಯನು ಚಾಕರರನ್ನು ಇಟ್ಟುಕೊಂಡು ಒಬ್ಬನೇ ಒಬ್ಬಮಗನಾದ ಸ್ವಾಮಿರಾಯನನ್ನು ಸಲಹುತ್ತ ಬಂದಿದ್ದನು. ಈ ರಕ್ಷಣೆಯಲ್ಲಿ ಮಾತೆಯ ಮಮತೆಯಿರಲಿಲ್ಲ; ಸಹೋದರಿಯರ ಅಕ್ಕರತೆಯಿರಲಿಲ್ಲ. ಒಟ್ಟಿನ ಮೇಲೆ ಸ್ವಾಮಿರಾಯನು ನಾರೀ-ಹೃದಯದ ಉಚ್ಚ-ಪ್ರೀತಿಯಿಂದ ವಂಚಿತನಾಗಿದ್ದನು.

ಶಿವರಾಯನಿಗೆ ತಂಗಿಯೊಬ್ಬಳಿದ್ದಳು. ಇವಳು ಬೇರೆ ಗ್ರಾಮದಲ್ಲಿರುತ್ತಿದ್ದಳು. ಒಮ್ಮೊಮ್ಮೆ ಅಣ್ಣನ ಮನೆಗೆ ಬಂದು, ಒಂದೆರಡು ದಿವಸ ಇದ್ದು, ಅಣ್ಣನನ್ನೂ, ಅಳಿಯನನ್ನೂ ನೋಡಿಕೊಂಡು ಹೋಗುತ್ತಿದ್ದಳು. ಇವಳ ಸಹವಾಸವು ಸ್ವಾಮಿರಾಯನಿಗೆ ಸಂತೋಷಕರವಾಗಿತ್ತು; ಆದರೆ ಈ ಆನಂದವು ಮರುಭೂಮಿಯ ಮಳೆಯಂತೆ ಅಲ್ಪಕಾಲದ್ದು.

ಚಂದ್ರಿಕೆಯು ಮನೆಯಲ್ಲಿ ಕಾಲಿಟ್ಟನಂತರ ಸ್ವಾಮಿರಾಯನ ವೈಚಿತ್ರ್ಯ ಹೀನ ನೀರಸ ಜೀವನಯಾಪನೆಯು ಕ್ರಮಶಃ ಸರಸವಾಗುತ್ತ ನಡೆದಿತ್ತು. ಶಿವರಾಯನ ಪ್ರೇಮಶೂನ್ಯ ಸೇವಕರಿಂದೊಡಗೂಡಿದ ಅಂಧಕಾರಮಯ ಸಂಸಾರವು ಪುನಃ ಪ್ರಕಾಶವನ್ನು ಕಾಣುವದರಲ್ಲಿತ್ತು; ಆದರೆ ಒಂದು ಅಚಿಂತ್ಯ ಘಟನೆಯಿಂದ ಆ ಪ್ರದೀಪವು ಮಾಯವಾದದ್ದಲ್ಲದೆ, ಮೊದಲಿನ ಅಂಧಕಾರದಲ್ಲಿ ದುರ್ಧರವಾದ ದಾಹವನ್ನುಂಟುಮಾಡಿತು! ಶೀತಕಾಲದ ಬೇಗ ಲಯಹೊಂದುವ ಅಪರಾಹ್ನದ ಅಸ್ಪಷ್ಟತೆಯ ಕಡೆಗೆ ನೋಡಿ ನೋಡಿ ಸ್ವಾಮಿರಾಯನ ಮನಸ್ಸು ಗ್ಲಾನಿಯನ್ನೂ, ತಿರಸ್ಕಾರವನ್ನೂ ಹೊಂದಿ, ವಿಶ್ವಸಂಸಾರದ ವಿಷಯದಲ್ಲಿ ಕೋಪಗೊಂಡಿತು!

ಸ್ವಾಮಿರಾಯನು ಕಾಲಸಪ್ಪಳವ ಕೇಳಿ ತಿರುಗಿ ನೋಡಿದನು. ಒಬ್ಬ ಚಾಕರನು ಬಂದು ನಿಂತಿದ್ದನು. ಸ್ವಾಮಿರಾಯನು ಮಾತಾಡದೆ ಆ ಭೃತ್ಯನನ್ನು ನೋಡಹತ್ತಿದನು. ಸೇವಕನು:—'ದನಿಯರು ನಿಮ್ಮನ್ನು ಕರೆಯುತ್ತಿದ್ದಾರೆ.' ಎಂದು ಹೇಳಿದನು.

"ಯಾಕೆ, ಕಾರಣವೇನು?" ಸ್ವಾಮಿರಾಯನು ಕೇಳಿದನು. ಸೇವಕನು ಕಾರಣವನ್ನು ಹೇಳದವನಾಗಿ ಸುಮ್ಮನಿದ್ದನು ಸ್ವಾಮಿರಾಯನು ತುಸ ಹೊತ್ತು ಆಲೋಚಿಸಿ, ಕೆಳಮನೆಯಲ್ಲಿರುವ ತಂದೆಯ ಕಡೆಗೆ ಹೊರಟನು.

ಪಡಸಾಲೆಯಲ್ಲಿ ಶಿವರಾಯನೊಬ್ಬನೇ ಕುಳಿತಿದ್ದನು. ಮಗನನ್ನು ನೋಡಿ 'ಕುಳಿತುಕೊಳ್ಳು' ಎಂದು ಹೇಳಿದನು. ಸ್ವಾಮಿರಾಯನು ಬೇರೆ ಕಡೆಗೆ ಮೋರೆಮಾಡಿ ಹಾಗೇ ನಿಂತುಕೊಂಡನು. ಶಿವರಾಯನು ಉಪೋದ್ಘಾತವನ್ನೇನೂ ತೆಗೆಯದೆ, "ಕನ್ಯೆಯನ್ನು ಗೊತ್ತು ಮಾಡಿದ್ದೇನೆ; ನಾಳಿನ ಮಾಘಶುದ್ಧ ದ್ವಾದಶಿಯ ದಿವಸ ಲಗ್ನ ಮುಹೂರ್ತವು ನಿಶ್ಚಿತವಾಗಿದೆ," ಎಂದು ಹೇಳಿದನು.

ಕೋಪಗೊಂಡಿದ್ದ ಸ್ವಾಮಿರಾಯನ ಮನಸ್ಸು ವಿವೇಕದ ಕಡಿವಾಣವನ್ನು ಕಿತ್ತೊಗೆದು ಸ್ವೈರವಾಗಿ ಸಂಚರಿಸುವದರಲ್ಲಿತ್ತು; ಆದರೆ ಸ್ವಾಮಿರಾಯನು ಆ ಚಿತ್ತವನ್ನು ಪ್ರಯತ್ನಪೂರ್ವಕವಾಗಿ ಅಂಕೆಯಲ್ಲಿ ತಕ್ಕೊಂಡು, "ಲಗ್ನವನ್ನು ಗೊತ್ತುಪಡಿಸುವ ಮೊದಲು ನನ್ನನ್ನು ವಿಚಾರಿಸಿದ್ದರೆ ಒಳಿತಾಗುತ್ತಿತ್ತು." ಎಂದು ವಿನಯದಿಂದ ಹೇಳಿದನು.

"ಅದೇಕೆ?"

ಸ್ವಾಮಿರಾಯನು ತುಸ ಹೊತ್ತು ವಿಚಾರಮಾಡಿ ಹೇಳಿದನು: "ಹಾಗೆ ಮಾಡಿದ್ದರೆ, ನೀವು ಮಾತು ಕಳಕೊಂಡು ಪೇಚಾಡುವ ಪ್ರಸಂಗ ಬರುತ್ತಿರಲಿಲ್ಲ."

ಶಿವರಾಯನು ಎಲಿಗೆ ಸುಣ್ಣವನ್ನು ಹಚ್ಚುತ್ತಿದ್ದನು. ಕೈಯೊಳಗಿನ ಎಲಿಯನ್ನು ಕೆಳಗಿಟ್ಟು ಮಗನನ್ನು ಸಿಟ್ಟಿನಿಂದ ನೋಡುತ್ತ :-"ನೀನು ಅನ್ನುವ ದೇನೋ ನನಗೆ ತಿಳಿಯದು! ಮಾತು ಕಳಕೊಳ್ಳುವದೇಕೆ? ಪೇಚಾಡುವದೇಕೆ?'' ಎಂದು ಕೇಳಿದನು.

"ನಾನು ವಿವಾಹವನ್ನು ಮಾಡಿಕೊಳ್ಳುವದಿಲ್ಲ!'' ಸ್ವಾಮಿರಾಯನು ನಿರ್ಧರದಿಂದ ಹೇಳಿದನು.

"ಯಾಕೆ?''

ಸ್ವಾಮಿರಾಯನು ತುಸ ಅನುಮಾನಿಸುತ್ತ:—"ಇಚ್ಛೆ ಇಲ್ಲ'' ಎಂದನು.

ಶಿವರಾಯನ ಕೋಪವು ಮತ್ತಿಷ್ಟು ಹೆಚ್ಚಿತು. ಸಿಟ್ಟಿನಿಂದ ಸಂತಪ್ತನಾದ ಅವನು:-"ನೀನು ಹೀಗೆ ಸ್ವೇಚ್ಛಾಚಾರಿಯಾದ ಬಳಿಕ ನಾನಾದರೂ ಸ್ಪಷ್ಟವಾಗಿ ಮಾತಾಡಬೇಕಾಗಿದೆ! ನೀನು ಗೋವಿಂದರಾಯನ ಮಗಳನ್ನು ಮನಃಪೂರ್ವಕವಾಗಿಯೂ ಬಿಡಲಿಕ್ಕೆ ಸಮರ್ಥನಾಗಲಾರೆಯಾ?'' ಎಂದು ಕೇಳಿದನು.

"ಆ ಮಾತು ಮುಗಿದು ಹೋಗಿದೆ. ಅದನ್ನು ಮೇಲಿಂದ ಮೇಲೆ ಆಡಿ ಉಪಯೋಗವೇನು? ಅದರ ಸಲುವಾಗಿ ಹೇಳತಕ್ಕದ್ದನ್ನು ಒಮ್ಮೆ ನಿಮ್ಮ ಮುಂದೆ ಹೇಳಿಬಿಟ್ಟಿದ್ದೇನೆ.'' ಸ್ವಾಮಿರಾಯನು ನುಡಿದನು.

"ಹಾಗಾದರೆ ಮದುವೆ ಮಾಡಿಕೊಳ್ಳುವದಕ್ಕೆ ಏಕೆ ಅಲ್ಲಗಳೆಯುತ್ತಿರುವೆ?''

"ಈಗಾದ ಸಂಗತಿಯನ್ನು ಅನುಲಕ್ಷಿಸಿಯೇ ಮತ್ತೆ ಲಗ್ನ ಮಾಡಿಕೊಳ್ಳುವದಕ್ಕೆ ಒಲ್ಲೆನೆನ್ನುತ್ತಿರುವೆನು. ಇಂದು ವಿವಾಹ ಮಾಡಿಕೊಳ್ಳಬೇಕು; ಮುಂದೆ ಒಂದೆರಡು ದಿವಸಗಳಲ್ಲಿ ಅವಳನ್ನು ತ್ಯಜಿಸಬೇಕು; ಇದಕ್ಕಿಂತಲೂ ಮದುವೆಯನ್ನು ಮಾಡಿಕೊಳ್ಳದಿರುವದೇ ಮೇಲು!"

ಮಗನ ಮಾತಿನಲ್ಲಿಯ ವ್ಯಂಗ್ಯವೂ ತಿರಸ್ಕಾರವೂ ಶಿವರಾಯನ ಮನಸ್ಸಿಗೆ ಬಲವಾಗಿ ಹತ್ತಿತು. ಅವನು ಮಗನನ್ನು ಉರಿಗಣ್ಣಿನಿಂದ ನೋಡುತ್ತ: "ಇಂದಿನಿಂದ ನೀನು ನನ್ನ ಯಾವ ಮಾತನ್ನೂ ಕೇಳದೆ ಮನಬಂದಂತೆ ನಡೆಯುವೆನೆಂದು ಅನ್ನುತ್ತಿರುವೆಯಷ್ಟೆ?'' ಎಂದು ಕೇಳಿದನು.

"ನಾನು ಹಾಗೆ ಅನ್ನುವದಿಲ್ಲ ಎರಡನೆಯ ಲಗ್ನವನ್ನು ಮಾಡಿಕೊಳ್ಳುವದಿಲ್ಲವೆಂಬದನ್ನು ಮಾತ್ರ ಸ್ಪಷ್ಟವಾಗಿ ಹೇಳುತ್ತೇನೆ. ಕಾರಣ ತಾವು ಅತ್ತಿತ್ತ ಅನುಸಂಧಾನ ನಡಿಸಿ, ಪೇಚಿನಲ್ಲಿ ಬೀಳಬೇಡಿರಿ.''

"ನೀನು ನನ್ನ ಏಕಮಾತ್ರ ಪುತ್ರನೆಂದು ನೀನು ಮಾಡುತ್ತಿರುವ ಸಕಲ ಪೀಡೆಗಳನ್ನು ಸುಮ್ಮನೆ ಸಹಿಸಿಕೊಳ್ಳುವೆನೆಂದು ತಿಳಿದಿರುವಿಯಾ?''

ಹಿಂದೆ ಚಂದ್ರಿಕೆಯನ್ನು ಬಿಡುವ ವಿಷಯದಲ್ಲಿ ತಂದೆ-ಮಕ್ಕಳ ಆಲೋಚನೆ ನಡೆದಾಗ್ಗೆ ತಂದೆಯು 'ನೀನು ಹೆಂಡತಿಯನ್ನು ಬಿಡದಿದ್ದರೆ ನಾನು ನಿನ್ನನ್ನೇ ಹೊರದೂಡುವೆನು.' ಎಂದು ಮಗನಿಗೆ ಭಯದೋರಿದ್ದನು. ಇಂದೂ ಶಿವರಾಯನು ಅದೇ ಅರ್ಥವನ್ನೊಳಗೊಂಡ ಮಾತನಾಡಿದನು. ಸ್ವಾಮಿರಾಯನ ಸಿಟ್ಟು ಇಮ್ಮಡಿಸಿತು. ಹೀಗೆ ತಂದೆಯಿಂದ ಮಾತುಮಾತಿಗೆ ಅಪಮಾನವನ್ನು ಸಹಿಸಿ ಮನೆಯಲ್ಲಿರುವದಕ್ಕಿಂತ, ಹೊರಬಿದ್ದು ಭಿಕ್ಷೆ ಬೇಡಿಯಾದರೂ ಉಪಜೀವನ ಸಾಗಿಸಿಕೊಳ್ಳುವದು ಉತ್ತಮವೆಂದು ಸ್ವಾಮಿರಾಯನಿಗೆ ಅನಿಸಿತು ಅವನು ಕೋಪಪೂರ್ಣ ಸ್ವರದಿಂದ ಹೇಳಿದನು:—"ನಿಮ್ಮ ಸಂಪತ್ತಿನ ಆಶೆಯಿಂದ ನೀವು ಮಾಡುತ್ತಿರುವ ಅಪಮಾನವನ್ನೆಲ್ಲ ತಾಳಿಕೊಂಡಿರುವಂತಹ ದುರ್ಬಲಚಿತ್ತನು ನಾನಲ್ಲ! ನನ್ನ ಶರೀರದಲ್ಲಿ ನಿಮ್ಮ ರಕ್ತವಿದೆ-ನಾನು ನಿಮ್ಮ ದತ್ತಕಮಗನಲ್ಲ!''

ಮುಂದೇನು ಮಾತಾಡಬೇಕೆಂಬದು ಶಿವರಾಯನಿಗೆ ಹೊಳೆಯಲಿಲ್ಲ. ಅವನು ಸುಮ್ಮನಾಗಿಬಿಟ್ಟನು. ಸ್ವಾಮಿರಾಯನು ತಂದೆಯ ಉತ್ತರದ ಹಾದಿಯು ನೋಡದೆ "ಲಗ್ನದ ವಿಷಯದಲ್ಲಿ ನನ್ನ ನಿರ್ಧಾರವನ್ನು ತಿಳುಹಿದ್ದೇನೆ. ಉಳಿದ ಸಂಗತಿಗಳ ಬಗ್ಗೆ ನಿಮ್ಮ ಮನಸ್ಸಿಗೆ ಬಂದಂತೆ ವ್ಯವಸ್ಥೆ ಮಾಡಿಕೊಳ್ಳಬಹುದು; ನನ್ನ ಅಡ್ಡಿಯುಂಟಾಗದು ಇನ್ನು ನಾನು ತಮಗೆ ಹೇಳತಕ್ಕದ್ದೇನೂ ಇಲ್ಲ" ಎಂದು ಹೇಳಿ ಆ ಸ್ಥಳದಿಂದ ಹೊರಟು ನಡೆದನು.

ಮಗನ ಆಜ್ಞಾಧಾರಕತೆಯ ಬಗ್ಗೆ ಇದ್ದ ಶಿವರಾಯನ ಅಭಿಮಾನವು ಸಮೂಲ ನಾಶವಾಯಿತು.

——

## ೪

*

ಕಾಲಗತಿಯನ್ನು ಒಂದೇ ಒಂದು ಶಬ್ದದಿಂದ ಯಥಾರ್ಥವಾಗಿ ವರ್ಣಿಸುವದಾದರೆ 'ಅಪ್ರತಿಬಂಧವಾದುದು' ಎಂದು ಹೇಳಬೇಕಾಗುತ್ತದೆ. ಸುಖದುಃಖ, ರೋಗ-ಶೋಕ, ಹಾಸ್ಯ-ರೋದನ ಇವುಗಳಲ್ಲಾವುದನ್ನಾದರೂ ಅನುಲಕ್ಷಿಸಿ, ಆ ಅಂಧ-ಅವಿಶ್ರಾಂತ ಗತಿಯು ಒಂದು ಕ್ಷಣ ಸಹ ನಿಲ್ಲುವದಿಲ್ಲ. ಅಂತೆಯೇ ಗೋವಿಂದರಾಯನ ವೇದನಾಪೀಡಿತ ಸಂಸಾರವು ದುಃಖದ ದೊಡ್ಡ ಹೊರೆಯನ್ನು ಹೊತ್ತಿದ್ದರೂ, ಜಗತ್ತಿನೊಡನೆ ಮೇಳು-ತಾಳದಿಂದ ನಡೆದಿತ್ತು. ಈ ನಡೆಯುವದರಲ್ಲಿ ಭೇದವು ಇದ್ದೇ ಇದೆ. ಕೆಲವರು ಯಾವ ವಾಹನಗಳಲ್ಲಿ ಕುಳಿತುಕೊಂಡು ಸುಖದಿಂದ ಸಾಗುತ್ತಿದ್ದಾರೆ. ಬೇರೆ ಕೆಲವರು ಬರಿಗಾಲಿನಿಂದ

ನಿಟ್ಟುಸಿರು ಬಿಡುತ್ತ ನಡೆಯುತ್ತಿದ್ದಾರೆ; ಆದರೆ ಸುಮ್ಮನೆ ಕುಳಿತಿರಲಿಕ್ಕಾಗದು. ಎಲ್ಲರೂ ನಡೆಯಲೇಬೇಕು.

ಚಂದ್ರಿಕೆಯು ಅತ್ತೆಯ ಮನೆಯಿಂದ ಬಹಿಷ್ಕೃತಳಾದ ತರುವಾಯ ಮೂರು ವರ್ಷಗಳ ದೀರ್ಘಕಾಲವು ಕಳೆದು ಹೋಗಿದೆ. ರಮಾಬಾಯಿ—ಗೋವಿಂದರಾಯರ ಹೃದಯದ ಆ ಗಾಯವು ಕಾಲದ ಪ್ರಲೇಪನದಿಂದ ಕ್ರಮಶಃ ಮಾಯುತ್ತ ಬಂದಿದೆ. ದುರ್ಭಾಗಿನಿಯಾದ ದುಹಿತೆಯ ದುರದೃಷ್ಟದಿಂದುಂಟಾದ ಅವರ ಮನೋದುಃಖವು ಕಡಿಮೆಯಾಗುತ್ತ ನಡೆದಿದೆ. ತಮ್ಮ ಪತಿಪರಿತ್ಯಾಗಿನಿಯಾದ ಪುತ್ರಿಯು ಹಣೆಯಲ್ಲಿ ಚಂದಿರಬಟ್ಟನ್ನೂ ಕೈಯಲ್ಲಿ ಬಳೆಗಳನ್ನೂ ಧರಿಸಿಕೊಂಡಿದ್ದರೂ ವಿಧವೆಯಂತೆಯೇ ವಿಷಯವಿರಕ್ತಿನಿಯಾಗಿರುವದು ತಕ್ಕದೆಂಬದನ್ನು ಅವರು ತಿಳಿದಿದ್ದರು; ಹಾಗು ಈ ಅರಿವು ತಮ್ಮ ಮಗಳಲ್ಲಿ ಉಂಟಾಗುವ ವಿಷಯದಲ್ಲಿ ಜಾಗರೂಕರಾಗಿದ್ದರು.

ಆದರೆ ಈ ವಿಷಯದಲ್ಲಿ ಚಂದ್ರಿಕೆಯ ಮನಸ್ಥಿತಿಯು ಜನನೀ ಜನಕರ ಅನುಗಾಮಿಯಾಗಿರಲಿಲ್ಲವಿಷ್ಟೇ ಅಲ್ಲ; ವಿಪರೀತವಾಗಿತ್ತು. ತಂದೆಯು ತನ್ನ ಬೀಗನೊಡನೆ ಬಡೆದಾಡಿ ಮಗಳನ್ನು ತನ್ನ ಮನೆಗೆ ಕರೆತಂದದ್ದರಿಂದ, ಚಂದ್ರಿಕೆಯು ಮಾತಾ-ಪಿತೃಗಳ ಚಂಚಲತೆಯನ್ನು ನೋಡಿ ಕಳವಳಗೊಂಡದ್ದೇನೋ ನಿಜ; ಆದರೆ ಆ ಕಲಹದ ನಿಜಪರಿಣಾಮದ ಕಲ್ಪನೆಯು ಆ ಬಾಲೆಗಾಗಿರಲಿಲ್ಲ. ಅಂದು ಅವಳಲ್ಲಿ ವಾಸನೆಯ ಉನ್ಮಾದನೆಯಿರಲಿಲ್ಲ; ಅರ್ಥಾತ್ ಹಾನಿಯ ಆಳತೆಯೂ ಕಿಂಚಿತ್ಕರವಾಗಿತ್ತು; ಆದರೆ ಕಳೆದ ಮೂರು ವರ್ಷಗಳಲ್ಲಿ ಅವಳ ದೇಹದಲ್ಲೂ ಮನಸ್ಸಿನಲ್ಲೂ ಪ್ರಬಲವಾದ ಪರಿವರ್ತನೆಯಾಗಿತ್ತು. ಪ್ರಾಯದಿಂದ ಪರಿಪೂರ್ಣಗಳಾದ ಅವಯವಗಳ ಪ್ರಬಲ ಪೀಡೆಯಿಂದ ಆ ಪ್ರಮದೆಯ ಪರಿತ್ರಾಣವೆಂತು? ಪ್ರತಿಕ್ಷಣದಲ್ಲಿ ಕ್ರಮಶಃ ಸಂಚಿತವಾಗುತ್ತಿರುವ ಆ ಶಕ್ತಿಗೆ ಸಾರ್ಥಕತೆಯ ವಿಸ್ತೃತ ಪ್ರವಾಹದಲ್ಲಿ ಶಾಂತರೀತಿಯಿಂದ ಹರಿದು ಹೋಗುವ ಉಪಾಯವಿಲ್ಲದ ಬಳಿಕ ಅದು ಉದ್ದಾಮವಾಗದೆಬಿಟ್ಟೀತೇ?

ಮೊದ ಮೊದಲು ಚಂದ್ರಿಕೆಯು ನಡೆದು ಹೋದ ಸಂಗತಿಯು ತೀರ ಸಾಮಾನ್ಯವಾದದ್ದೆಂದೇ ಭಾವಿಸಿದಳು; ಯಾಕಂದರೆ, ಬೀಗರ ಕಲಹದ ಕಾರಣವು ಅವಳಿಗೆ ತಿಳಿದಿರಲಿಲ್ಲ. ಯಾವುದೋ ಒಂದು ಸಣ್ಣ ಕಾರಣಕ್ಕೋಸುಗ ಆಗಿದ್ದ ಬಡೆದಾಟವು ತುಸ ದಿನಗಳಲ್ಲಿ ಶಾಂತವಾಗಿ ಪುನಃ ತಾನು ಮೊದಲಿನಂತೆ ಅತ್ತೆಯ ಮನೆಯನ್ನು ಅಧಿಕರಿಸುವೆನೆಂದು ಅವಳು ಎಣಿಕೆ ಹಾಕಿಕೊಂಡಿದ್ದಳು. ಪತಿಯ ಬಳಿಯಲ್ಲಿ ಅವಳು ಕೇವಲ ನಿರಪರಾಧಿನಿಯಷ್ಟೇ ಅಲ್ಲ; ಪತಿಪ್ರೇಮದ ಬಹುಭಾಗವನ್ನು ಈ ಅಲ್ಪಾವಕಾಶದಲ್ಲಿ ಆಕರ್ಷಿಸಿಕೊಂಡು ಬಿಟ್ಟ

ದ್ದಳು. ಹೀಗಿರಲು ತಾನು ಸ್ತ್ರೀಯ ಸಹಜವೂ ನ್ಯಾಯಪ್ರಾಪ್ತವೂ ಆದ ಅಧಿಕಾರದಿಂದ ವಂಚಿತಳಾಗುವದೆಂತು? ನಿಷ್ಪಾಪಳಾಗಿಯೂ ಆಜನ್ಮ ಪ್ರಾಯಶ್ಚಿತ್ತವನ್ನನುಭವಿಸಬೇಕಾಗಿರುವದು ಸಾಧ್ಯವಲ್ಲ! ಎಂದು ಚಂದ್ರಿಯು ದೃಢವಾಗಿ ನಂಬಿದ್ದಳು; ಆದರೆ ಯಾವ ಪರಿವರ್ತನೆಯೂ ಇಲ್ಲದೆ ದಿವಸದ ತರುವಾಯ ದಿವಸಗಳೂ ತಿಂಗಳದ ತರುವಾಯ ತಿಂಗಳುಗಳೂ ಕ್ರಮಿಸುತ್ತ ನಡೆದುದನ್ನು ನೋಡಿ, ಶಾಂತಳಾಗಿದ್ದ ಆ ಬಾಲೆಯು ವ್ಯಗ್ರಳಾಗಿ ಪತಿಗೆ ಹಲವು ಪತ್ರಗಳನ್ನು ಬರೆದಳು. ಮೊದಲು ಸಹಜ ಪತ್ರಗಳು, ಆ ಮೇಲೆ ಅಭಿಮಾನ ಪ್ರದರ್ಶನದ ಪತ್ರಗಳು, ಬಳಿಕ ಕ್ರೋಧಸೂಚನೆ, ತರುವಾಯ ಅನುನಯ ವಿನಯ. ಇವುಗಳಲ್ಲಿಯ ಒಂದೊಂದು ಪತ್ರವನ್ನು ಬರೆದ ಬಳಿಕ ಕೆಲವು ಕಾಲದ ವರೆಗೆ ಪತಿಯ ಪ್ರತ್ಯುತ್ತರದ ಮಾರ್ಗಪ್ರತೀಕ್ಷೆಯಲ್ಲಿ ಆತುರಳಾಗಿರುತ್ತಿದ್ದಳು; ಹಾಗು ಮನಸ್ಸಿನಲ್ಲಿ ಪತಿಯ ಉತ್ತರದ ಅಭಿಪ್ರಾಯವನ್ನು ಕಲ್ಪಿಸುತ್ತಿದ್ದಳು. ಈ ಕಲ್ಪಿತ ಪತ್ರಗಳಲ್ಲಿ ಪ್ರಿಯನು ತನ್ನ ನಿಷ್ಠುರ ಆಚರಣೆಯ ಸಲುವಾಗಿ ಅನುತಾಪವನ್ನು ಪ್ರಕಾಶಮಾಡಿದ್ದನು! ಬಳಿಕ ತನ್ನ ಆ ಅಯೋಗ್ಯ--ಅಪರಾಧ ಮಾರ್ಜನೆಗಾಗಿ ಕಾತರತೆಯ ಕ್ಷಮೆಯನ್ನು ಕೇಳಿಕೊಂಡಿದ್ದನು! ಪತ್ರದ ಪ್ರತಿ ಅಕ್ಷರದಲ್ಲಿ ದುಃಖವೂ ವೇದನೆಯೂ ತುಂಬಿ ತುಳುಕುತ್ತಿತ್ತು! ತನ್ನ ತಿರಸ್ಕಾರಸೂಚಕ ತೀಕ್ಷ್ಣಪತ್ರಗಳ ಉತ್ತರವಾಗಿ ಪತಿಯು ಬರೆದ ಈ ಕಲ್ಪಿತಕಾತರ ಪತ್ರಗಳನ್ನೋದಿ ಚಂದ್ರಿಕೆಯ ಮನಸ್ಸು ತಲ್ಲಣಗೊಳ್ಳುತ್ತಿತ್ತು! ತರುವಾಯುದ ವಸಂತಕಾಲದ ಒಂದು ಅಪೂರ್ವ ಸಂಧ್ಯಾಕಾಲದಲ್ಲಿ ಪ್ರಕೃತಿದೇವಿಯು ಗಂಧ-ವರ್ಣಗಳಿಂದಲೂ ಪುಷ್ಪ-ಗೀತೆಗಳಿಂದಲೂ ಪ್ರಮತ್ತಕಾಮಿನಿಯಂತೆ ಲಾಲಸಚಂಚಲಳಾದಾಗ—ಮಲಯಪವನ, ಚಂದ್ರಕಿರಣ, ಕೋಕಿಲ ಕೂಜಿತ ಈ ಮೂರರ ಮಿಶ್ರಣದಿಂದ ಅದ್ಭುತ ರಸಾಯನವು ಸಿದ್ಧವಾಗಿ, ಈ ಉಗ್ರರಸವನ್ನು ಪಾನಮಾಡಿದ ವಿಶ್ವವು ವಿವಶವಾದಾಗ—ಸ್ವಾಮಿರಾಯನು ಇದೇ ಮಿಲನದ ಮಹಾಸುಮುಹೂರ್ತವೆಂದು ಭಾವಿಸಿ, ವ್ಯಥಿತನೂ ಅನುತಪ್ತನೂ ಆಗಿ ಚಂದ್ರಿಕೆಯ ಬಳಿಗೆ ಬಂದಿದ್ದಾನೆ! ಕಣ್ಣುಗಳಲ್ಲಿ ಅತುಲವಾದ ಆಗ್ರಹ, ಹೃದಯದಲ್ಲಿ ವ್ಯಾಕುಲಪ್ರೇಮ! ಶಾಂತ ಬಾಲೆಯು, ಪತಿಯ ಈ ಸ್ಥಿತಿಯನ್ನು ನೋಡಿ ಅರಳಿದ ಮೊಗ್ಗೆಯಂತೆ, ಸಂಕುಚಿತ ಶುಕ್ತಿಯಂತೆ ತನ್ನಲ್ಲಿ ತಾನೇ ಹುದುಗಿಕೊಂಡು ಸಂಜ್ಞಾಹೀನಳೂ ಶಬ್ದಹೀನಳೂ ಆಗಿದ್ದಾಳೆ! ಪತಿಯು ಆವೇದನ-ನಿವೇದನಗಳಿಂದಲೂ ಆ ಬಾಲೆಯನ್ನು ಸಂತಯಿಸಿ ಬಿಗಿಯಾಗಿ ಅಪ್ಪಿಕೊಂಡಿದ್ದಾನೆ!

ಆದರೆ ಇವೆಲ್ಲವೂ ಚಂದ್ರಿಕೆಯ ಕಲ್ಪನೆಯಲ್ಲಿ ಮಾತ್ರ! ಪ್ರತ್ಯಕ್ಷಾನುಭವ

ದಲ್ಲಿ ಇವುಗಳಲ್ಲೊಂದೂ ಇಲ್ಲ! ಅಕಟ, ಆ ಪ್ರತ್ಯುತ್ತರಗಳೆಲ್ಲಿ? ಆ ಉನ್ಮತ್ತ ಮೀಲನ ವೆಲ್ಲಿ? ಆ ವಸಂತಕಾಲದ ಮದಾಲಸ ಸಾಯಂಕಾಲವೆಲ್ಲಿ? ಇವೆಲ್ಲವೂ ಬೇಸಿಗೆಯ ಬಲ್ಬಿಸಿಲಿನಲ್ಲಿ ಬೆಂದು ಬೂದಿಯಾಗಿ ಹೋದವು. ಈ ರೀತಿಯಲ್ಲಿ ದಿನಗಳು ಕ್ರಮಿಸುತ್ತಿರುವಾಗ ಮೋಡಗಳಲ್ಲಿ ಸಿಡಿಲು ಹುಟ್ಟಿದಂತೆ ಆ ಕೋಮಲ ಬಾಲೆಯ ಹೃದಯದುಃಖದಲ್ಲಿ ವೈರವುದಯಿಸಿತು. ಈ ಬಗೆಯ ಮನ ಸ್ಥಿತಿಯುಳ್ಳ ಚಂದ್ರಿಕೆಯ ಜೀವನ ಪಥದಲ್ಲಿ ಒಂದು ದಿವಸ ಶಾಮರಾಯನು ಬಂದು ನಿಂತುಕೊಂಡನು.

---

## ೫

ಶಾಮರಾಯನು ತಾಯಿ-ತಂದೆಗಳನ್ನು ಕಳಕೊಂಡಿದ್ದ ಶ್ರೀಮಂತ ಯುವ ಕನು. ಮುಂಬಯಿಗೆ ತುಸ ದೂರದಲ್ಲಿರುವ ಗ್ರಾಮದವನು. ಉಡಾಳ ನಡ ತೆಗೆ ಧನದ ಅನುಕೂಲತೆಯು ಜೊತೆಯಾದರೆ ಮನುಷ್ಯನು ಯಾವ ದಾರಿ ಯ ಹಾದಿಕಾರನಾಗಬಹುದೋ, ಆ ದಾರಿಯ ಸಂದಿ-ಗೊಂದಿಗಳೂ ಶಾಮನಿಗೆ ಪರಿಚಿತವಾಗಿದ್ದವು; ಇಂಗಿತವರಿತ ಹಲವರು ಈ ವಿಷಯದಲ್ಲಿ ಶಾಮನು ಅದ್ಭುತ ಕುಶಲನೆಂದೂ ಅಲಂಕಾರಿಕ ಭಾಷೆಯಲ್ಲಿ ಹೇಳುವದಾದರೆ ಶಾಮನು ನಾರೀಮೃಗಯೆಯಲ್ಲಿ ನುರಿತ ನಿಷಾದನೆಂದೂ ಆಡಿಕೊಳ್ಳುತ್ತಿದ್ದರು. ಚಕಿತವೂ ತ್ರಸ್ತವೂ ಆದ ಯಾವುದೊಂದು ಹರಿಣಿಯನ್ನು ಹಿಡಿಯಬೇಕಾದರೆ, ಅದರ ಕಿವಿಯಲ್ಲಿ ಯಾವಾಗ್ಗೆ ಕೊಳಲಿನ ಯಾವ ರಾಗವನ್ನು ಸುರಿಸಬೇಕು? ಅದರ ಯಾವ ಮಾರ್ಗವನ್ನು ಪರಿಷ್ಕಾರವಾಗಿಡಬೇಕು? ಯಾವ ದಾರಿಯಲ್ಲಿ ಕಂಟಕ ಹರವಬೇಕು? ಅದರ ಪದಸ್ಖಾಲನಕ್ಕೋಸ್ಕರ ಅಲ್ಲಿ ಮರೆಯಾದ ತೆಗ್ಗನ್ನು ತೋಡಿಟ್ಟಿರಬೇಕು? ಮತ್ತು ಯಾವ ಚರಮ ಹಾಗು ಪರಮ ಸಮಯದಲ್ಲಿ ಹರಡಿದ್ದ ಜಾಲವನ್ನು ಮೆಲ್ಲನೆ ಇಲ್ಲವೆ ಬೇಗನೆ ಜಗ್ಗಿಕೊಳ್ಳಬೇಕು? ಎಂಬ ವಿಷಯಗಳಲ್ಲಿ ಈ ಬೇಡನು ಬಹು ಚತುರನಾಗಿದ್ದನು. ಈ ಪ್ರಸಂಗದಲ್ಲಿ ಅವನು ತನ್ನ ಗತಿಯನ್ನು ಬಹು ಮಂದವಾಗಿಡುತ್ತಿದ್ದುದರಿಂದ ನೋಡುವವ ರಿಗೆ ಅವನು ಗತಿಹೀನನೆಂದೇ ಭಾಸವಾಗುತ್ತಿತ್ತು; ಹಾಗು ಉದ್ದೇಶವನ್ನು ಮರೆಯಲ್ಲಿರಿಸಲು ಸಾಧಿಸುತ್ತಿದ್ದುದನಾದ್ದರಿಂದ ಕೈವಶವಾದ ಬೇಟೆಗೂ ಬೇಡನ ಧೈರ್ಯವು ಗೊತ್ತಾಗುತ್ತಿರಲಿಲ್ಲ.

ಶಾಮನಿಗೂ ಚಂದ್ರಿಕೆಗೂ ಆಪ್ತತ್ವದ ಸಂಬಂಧವಿತ್ತು; ಆದರೆ ಅದು ಬಹು ದೂರಿನದು. ಚಂದ್ರಿಕೆಯು ಶಾಮನ ದೂರ ಸಂಬಂಧದ ಅತ್ತೆಯ

ಅತ್ತಿಗೆಯು ಕಕ್ಕಿಯು ಮಗಳು; ಆದರೆ ದೂರದಲ್ಲಿದ್ದುದನ್ನು ಸಮೀಪಕ್ಕೆ ಜಗ್ಗಿ ಕೊಳ್ಳಬಲ್ಲ ಜಾಣನಿಗೆ ಯಾವದೂ ದೂರವೆನಿಸದು. ಅಂತೆಯೇ ಒಂದು ದಿನ ಶಾಮನು ಗೋವಿಂದರಾಯನ ಮನೆಗೆ ಹೋಗಿ ಚಂದ್ರಿಕೆಯನ್ನು ನೋಡಿ "ತಂಗೀ, ನಿನ್ನ ಈ ಅಣ್ಣನನ್ನು ಮರತೇ ಬಿಟ್ಟೆಯಾ?'' ಎಂದು ಕೇಳಿದನು. ಅಪರಿಚಿತ ತರುಣನನ್ನು ನೋಡಿ ಒಳ ಹೋಗುವದರಲ್ಲಿದ್ದ ಚಂದ್ರಿಕೆಯು ತಡೆದು ನಿಂತಳು; ಆದರೆ ಮಾತನಾಡಲಿಲ್ಲ. ಒಳಿಯಲ್ಲಿ ಕುಳಿತಿದ್ದ ಮಾತೆಯ ಮುಖದ ಕಡೆಗೆ ನೋಡಿದಳು.

ರಮಾಬಾಯಿಯು ನಗೆಮುಖದಿಂದ ಅಂದದ್ದು:—"ಮರೆಯುವದು ಹೇಗೆ? ಆದರೆ ಕಳೆದ ನಾಲ್ಕೈದು ವರುಷಗಳಿಂದ ನಾವು ನಿನ್ನನ್ನು ನೋಡಿಲ್ಲ. ಕಾರಣ ಚಂದ್ರಿಕೆಗೆ ನಿನ್ನ ಗುರುತು ತಪ್ಪಿರಬಹುದು. ಚಂದ್ರಿಕೆ, ನಿಮ್ಮಣ್ಣನಿಗೆ ನಮಸ್ಕಾರ ಮಾಡು.'' ಚಂದ್ರಿಕೆಯು ನಮಸ್ಕರಿಸಿದಳು. ಶಾಮನು 'ಚಿರ ಸುಖಿಯಾಗಿರು.' ಎಂದು ಹರಸಿದನು.

ರಮಾಬಾಯಿಯು ನಿಟ್ಟುಸಿರುಬಿಟ್ಟು ಹೇಳಿದ್ದು-"ಸುಖವೆಲ್ಲಿಯದಪ್ಪಾ? ದೇವರು ನಮ್ಮ ಸುಖದ ದಾರಿಯಲ್ಲಿ ದಾಟಲಾರದ ದೊಡ್ಡ ಗುಡ್ಡವನ್ನು ತಂದೊಡ್ಡಿದ್ದಾನೆ!"

ಶಾಮನಿಗೆ ಎಲ್ಲವೂ ಗೊತ್ತಿತ್ತು; ಆದರೆ ಅವನು ಏನೂ ಅರಿಯದವ ನಂತೆ ನಟಿಸಿ, ವಿಸ್ಮಯದಿಂದ:-"ಅದೇಕೆ ಕಕ್ಕಿ, ಹೀಗೇಕೆ ಅನ್ನುತ್ತಿರುವೆ? ಆದ ದ್ದಾದರೂ ಏನಾಯಿತು?" ಎಂದು ಕೇಳಿದನು.

ಚಂದ್ರಿಕೆಯು ತಾಯಿಯ ಬಳಿಯಲ್ಲಿ ಕುಳಿತಿದ್ದಳು. ರಮಾಬಾಯಿಯು ಮಗಳ ದುರ್ದೈವದ ಸಂಗತಿಯನ್ನು ಸಂಕ್ಷೇಪವಾಗಿ ಹೇಳತೊಡಗಿದಳು. ಈ ಕಥೆಯನ್ನು ಕೇಳುತ್ತ ಕುಳ್ಳಿರುವದಕ್ಕಿಂತ ಎದ್ದು ಮತ್ತೆಲ್ಲಾದರೂ ಹೋಗು ವದು ನೆಟ್ಟಗೆಂದು ಚಂದ್ರಿಕೆಗೆ ಅನಿಸಿತು; ಆದರೆ ಅವಳಿಂದ ಹಾಗೆ ಮಾಡ ಲಿಕ್ಕಾಗಲಿಲ್ಲ. ಮೋರೆಯನ್ನು ಕೆಳಗೆ ಮಾಡಿಕೊಂಡು ಅಲ್ಲಿಯೇ ಕುಳಿತಿದ್ದಳು. ಶಾಮನು ಈ ಕರುಣಾರಸಾತ್ಮಕ ಕಥೆಯನ್ನು ಛಲನೆಯಿಂದ ಕೇಳುತ್ತಿದ್ದರೂ, ಅವನ ಮುಖದಲ್ಲಿ ಆಗಾಗ್ಗೆ ಸಿಟ್ಟಿನ ಹಾಗು ತಿರಸ್ಕಾರದ ಅಕೃತ್ರಿಮ ಚಿಹ್ನೆಗಳು ಒಡಮೂಡುತ್ತಿದ್ದವು.

ಕಥೆಯು ಮುಗಿಯಿತು; ಶಾಮನು ಕ್ಷಣಕಾಲ ಮೌನವಾಗಿ ಕುಳಿತನು. ರಮಾಬಾಯಿಯು ಅವನ ಮುಖವನ್ನು ನೋಡಿ, ಕೋಪದಿಂದಲೂ ತಿರಸ್ಕಾರ ದಿಂದಲೂ ಶಾಮನ ಬಾಯಿಂದ ಶಬ್ದಗಳೇ ಹೊರಡಲೊಲ್ಲವೆಂದು ಭಾವಿಸಿದಳು ಶಾಮನು ಕಡೆಯಲ್ಲಿ ಹಲ್ಲು ಕಡಿದು, ಕುಗ್ಗಿದ ದನಿಯಿಂದ ದುರ್ಬೋಧವಾದ

ಕೆಲವು ಇಂಗ್ಲಿಷ ಶಬ್ದಗಳನ್ನುಚ್ಚರಿಸಿದನು; ತಾಯಿ-ಮಕ್ಕಳಿಗೆ ಅವುಗಳ ಅರ್ಥವು ತಿಳಿಯದಿದ್ದರೂ ಅವು ಶಿವರಾಯನ ಹಾಗು ಸ್ವಾಮಿರಾಯರ ವಿಷಯ ದಲ್ಲಿ ಉಚ್ಚರಿಸಲ್ಪಟ್ಟ ಕಟುಶಬ್ದಗಳೆಂದು ಗ್ರಹಿಸಿದರು.

ಶಾಮನ ಸಹಾನುಭೂತಿಯಿಂದ ರಮಾಬಾಯಿಯ ಕಣ್ಣುಗಳಲ್ಲಿ ನೀರು ಬಂದವು. ಅವಳು ಶೆರಗಿನ ತುದಿಯಿಂದ ಕಣ್ಣುಗಳನ್ನೊರಿಸಿಕೊಂಡು 'ಶಾಮಾ, ಏನು ಹೇಳಲಿಯಪ್ಪಾ! ನಮಗೊದಗಿದ ದುಃಖವನ್ನು ಯಾರ ಮುಂದೆ ಹೇಳಿದರೂ ತೀರದು! ಇದಕ್ಕಿಂತಲೂ ಮಗಳು....'' ಮುಂದೆ ಅವಳಿಂದ ಮಾತನಾಡಲಿಕ್ಕಾಗಲಿಲ್ಲ. ಈ ದುಃಖದ ಪ್ರಸಂಗದಲ್ಲೂ ಮಗಳ ಅಮಂಗಳ ವಾಕ್ಯಗಳು ಆ ಮಾತೆಯ ಬಾಯಿಂದ ಹೊರಬೀಳಲಿಲ್ಲ.

ಶಾಮನು ಕಣ್ಣು ಕೆಸಿದು ಮುಖವನ್ನು ಪಿಕ್ಕೃತ ಮಾಡಿಕೊಂಡು ಆವೇಶ ದಿಂದ ಹೇಳಿದ್ದು: ''ಸಮಗಾರ ದೇವರಿಗೆ ಮೊಚ್ಚೆಯ ಪೆಟ್ಟು! ಹೊಲೆಯರವರು! ಅವರಿಗೆ ಚನ್ನಾಗಿ ಕೈತೋರಿಸಲೇ ಬೇಕು!'' ಬಳಿಕ ತನ್ನ ಮಾತಿನ ಪರಿಣಾಮ ವನ್ನು ಕಂಡುಕೊಳ್ಳುವದಕ್ಕಾಗಿ ಚಂದ್ರಿಕೆಯ ಮೋರೆಯ ಕಡೆಗೆ ನೋಡಿದನು. ಮುಖಲಕ್ಷಣಗಳಿಂದ ಅವಳ ಭಾವವನ್ನು ಗ್ರಹಿಸಿ ಶಾಂತನಾಗಿ ಇಂತು ನುಡಿ ದನು:—''ಅಕ್ಕೋ, ಇದರಲ್ಲಿ ಸ್ವಾಮಿರಾಯನ ದೋಷವೇನೂ ಇಲ್ಲವೆಂದು ನನಗೆ ಅನಿಸುತ್ತದೆ; ಯಾಕಂದರೆ, ತಂದೆಯಿರುತ್ತಿರಲು ಅವನಿಗೆ ಯಾವ ಕೆಲ ಸವ ಮಾಡಲಿಕ್ಕೂ ಸ್ವಾತಂತ್ರ್ಯವಿಲ್ಲ. ವಿದ್ಯಾವಂತನಾದ ಅವನು ಸ್ವೇಚ್ಛೆಯಿಂದ ಹೀಗೆ ಪಶುವಿನಂತೆ ಆಚರಿಸಬಲ್ಲನೆಂಬುದನ್ನು ನಾನೆಂದೂ ಒಪ್ಪಲಾರೆನು! ಶಾಂತಳಾಗಿರು. ಕಾಲಾಂತರದಲ್ಲಿ ಎಲ್ಲವೂ ಸರಿಯಾಗುವದು.''

ರಮಾಬಾಯಿಯು ವ್ಯಥಿತ ಸ್ವರದಿಂದ ಅಂದದ್ದು:—''ಅಪ್ಪಾ, ನನಗೂ ಇಷ್ಟು ದಿನ ಈ ಆಶೆ ಇದ್ದಿತು; ಆದರೆ ಆ ಆಶೆ ಇಂದು ಉಳಿದಿಲ್ಲ! ಅಳಿಯನು ಮನಃಪೂರ್ವಕವಾಗಿಯೂ ಹೆಂಡತಿಯನ್ನು ಬಿಟ್ಟಿರದಿದ್ದರೆ, ಕಳೆದ ಮೂರು ವರ್ಷಗಳಲ್ಲಿ ಚಂದ್ರಿಕೆಗೆ ಒಂದು ಪತ್ರವನ್ನಾದರೂ ಬರೆಯುತ್ತಿರಲಿಲ್ಲವೆ? ಪತ್ರ ವಿಲ್ಲದಿದ್ದರಿಲ್ಲ! ಕೆಲವು ದಿವಸಗಳ ಹಿಂದೆ ಅವನು ನಮ್ಮ ಮನೆಯವರಿಗೆ ದಾರಿ ಯಲ್ಲಿ ಭೆಟ್ಟಿಯಾಗಿದ್ದನಂತೆ ಇವರು ಮಾತಾಡಿಸಿದರೂ, ಅವನು ಮಾತಾಡದೆ ಮೋರೆ ತಿರುವಿಕೊಂಡು ಹೋದನಂತೆ! ಹೀಗಿರಲು ಇನ್ನು ಮಗಳ ಸುಖದ ಆಶೆಯೆಲ್ಲಿ?''

ಮಾತಿನ ಝುರಿಯು ಹೀಗೆ ತನ್ನ ವಿಷಯದಲ್ಲಿಯೇ ಹರಿಯಹತ್ತಿರುವ ದನ್ನು ತಿಳಿದು, ಚಂದ್ರಿಕೆಗೆ ಅಲ್ಲಿ ಕುಳ್ಳಿರುವದಕ್ಕಾಗಲಿಲ್ಲ. ಅವಳು ಎದ್ದು ಹೋಗುವುದಕ್ಕುಂಟಾಗುತ್ತಿರುವ ಸಂಕೋಚವನ್ನು ಹರಿದೊಗೆದು, ಎದ್ದು

ನಿಂತಳು. ಮಾತೆಯು ಮಗಳ ಭಾವವನ್ನು ತಿಳಿದು, "ಚಂದ್ರಿಕೆ, ನಿಮ್ಮಣ್ಣನಿಗೆ ಒಂದು ಕಪ್ಪು ಚಹಾ ತಂದು ಕೊಡು. ಬಿಸಿಲಿನಲ್ಲಿ ಅಡ್ಡಾಡಿ ಬಂದಿದ್ದರಿಂದ ಮೋರೆಯು ಒಣಗಿ ಹೋಗಿದೆ! ಚಹದಿಂದ ಶ್ರಮ ಪರಿಹಾರವಾಗುವದು." ಎಂದು ಹೇಳಿದಳು. ಶಾಮನು ಚಹದ ಆವಶ್ಯಕತೆಯಿಲ್ಲೆಂದು ಸೂಚಿಸಿ:-"ಕಕ್ಕಿ, ಈ ಸಂಗತಿಯನ್ನು ನೀನು ನನಗೆ ಮೊದಲೇ ಏಕೆ ತಿಳುಹಲಿಲ್ಲ? ನಾನು ಆಗಲೇ ಬಗೆಹರಿಸಿ ಬಿಡುತಿದ್ದೆನು! ನಿಮ್ಮ ಮೇಲೆ ಈ ಪ್ರಸಂಗವೇ ಬರುತ್ತಿರಲಿಲ್ಲ! ಆಗಲಿ, ಈಗಾದರೂ ಏನಾಗಿದೆ? ನಾನು ಎಲ್ಲವನ್ನೂ ಸರಿಪಡಿಸುವೆನು" ಎಂದು ನುಡಿದನು.

ಚಂದ್ರಿಕೆಯು ಮುಂದಿನ ಮಾತು ಕೇಳುವ ಕುತೂಹಲವನ್ನಿಟ್ಟುಕೊಂಡು ಮೆಲ್ಲ ಮೆಲ್ಲನೆ ಒಳಗೆ ಹೋದಳು. ಶಾಮನ ಆಶ್ವಾಸ ವಚನವನ್ನು ಕೇಳಿ, ಅವಳ ನಿರಾಶಾ ಹೃದಯವು ವಿದ್ಯುತ್-ಸ್ಪರ್ಶವಾದಂತೆ ಚಕಿತವಾಯಿತು; ಆದರೆ ಅದು ಆಶೆಯ ಆನಂದದಿಂದಲ್ಲ; ಕುತೂಹಲತೆಯ ಉತ್ತೇಜನದಿಂದಾದದ್ದು—ಸುಖದ ಬೀದಿಗೆ ಹೋಗುವಾಗ ಹತ್ತುವ ಅಗಸಿಯ ಲೋಹದ್ವಾರಕ್ಕೆ ಅದೃಷ್ಟವು ಜಡೆವಿದ್ದ ಜಡವಾದ ಅಗಳಿಯನ್ನು ತೆಗೆಯುವದಕ್ಕೆ ಮಾಡಬೇಕಾಗಿದ್ದ ಉಪಾಯುಗಳಲ್ಲಿ ಇನ್ನಾವವು ಉಳಿದದೆ? ಎಂಬದನ್ನು ಕೇಳಿಕೊಳ್ಳುವ ಆಗ್ರಹದಿಂದ.

ರಮಾಬಾಯಿಯು ಆಶೆಯ ಆನಂದದಿಂದ ಉಬ್ಬಿ ಹೋದಳು. ಮಗಳ ದುರ್ದೈವಕ್ಕೋಸುಗ ಆ ಮಾತೆಗೆ ಕ್ಷಣಸಹ ಸುಖವಿರಲಿಲ್ಲ. ಕಾಲಕ್ರಮದಿಂದ ಮೊದಲಿನ ದುಃಖದ ಆ ತೀವ್ರಕ್ಲೇಶವು ಕಡಿಮೆಯಾಗಿದ್ದುದೇನೋ ನಿಜ; ಆದರೆ ಒಂದು ವಿಧದ ಗಂಭೀರ ವೇದನೆಯು ಅವಳ ಹೃದಯವನ್ನು ಸದಾ ಭಾರವಾಗಿರಿಸಿತ್ತು. ಅಂತೆಯೇ ಅವಳು ಸಂಭವ-ಅಸಂಭವಗಳ ವಿಚಾರ ಮಾಡದೆ ದೊರೆತ ಕಿಂಚಿದಾಶ್ವಾಸನದಿಂದಲೇ ಸಂತುಷ್ಟಚಿತ್ತಳಾಗಿ, "ಶಾಮ, ನೀನು ನನ್ನ ಮಗನ ಸಮಾನ. ನಿನಗೆ ಹೆಚ್ಚಿಗೆ ಹೇಳಲೇನು? ಮಗಳ ದುರವಸ್ಥೆಯನ್ನು ನೋಡಿ ನೋಡಿ ಹೃದಯವು ಕಂದಿಹೋಗಿದೆ! ಏನೇ ಆಗಲಿ, ಮಗಳು ಹಾದಿಗೆ ಹತ್ತಿದರೆ ಸಾಕು! ಇಲ್ಲದಿದ್ದರೆ ತಾಯಿಯಾಗಿಯೂ ನಾನು ಚಂದ್ರಿಕೆಯು ಇರುವದಕ್ಕಿಂತ ಸಾಯುವದು ಒಳಿತೆಂದು ಸಂತಾಪದಿಂದ ಅನ್ನಬೇಕಾಗಿದೆ!" ಎಂದು ಅಂದಳು.

ಶಾಮನು ತನ್ನ ಚಾಣಾಕ್ಷ್ಯದ ಮಾತುಗಳಿಂದ ರಮಾಬಾಯಿಯ ಆಶಾಂಕುರವನ್ನು ಬಲವಾದ ವೃಕ್ಷವನ್ನಾಗಿ ಮಾಡಿದನು. ರಮಾಬಾಯಿಯು ಮಗಳ ದುರದೃಷ್ಟವು ದೂರವಾಯಿತೆಂದೂ, ಸಂತೋಷವು ಸಮೀಪಿಸಿತೆಂದೂ

ದೃಢವಾಗಿ ನಂಬಿ, ಹರ್ಷೋತ್ಫುಲ್ಲಳಾದಳು. ಈ ಒಳಗಾಗಿಯೇ ಶಾಮನು ಭೆಟ್ಟಿಯಾಗಿದ್ದರೆ ಬಹಳ ನೆಟ್ಟಗಾಗುತ್ತಿತ್ತೆಂದು ಒಮ್ಮೆ ಹಳಹಳಿಸಿದಳು. ಈಗ ಲಾದರೂ ಏನಾಯಿತು, ಶಾಮನು ದೇವದೂತನಾಗಿ ನನ್ನ ಬಳಿಗೆ ಬಂದಿರುವ ನೆಂದು ಪರಕ್ಷಣದಲ್ಲಿಯೇ ಭಾವಿಸಿ, ಆ ಕಲ್ಪನೆಯ ದೇವಪ್ರತಿನಿಧಿಗೆ ಮನಸ್ಸಿ ನಲ್ಲಿಯೇ ಶತಶಃ ಪ್ರಣಾಮಗಳನ್ನರ್ಪಿಸಿದಳು.

ಚಂದ್ರಿಕೆಯು ಉಪಾಹಾರದ ಪದಾರ್ಥಗಳನ್ನು ಸಿದ್ಧಪಡಿಸಿ ತಂದಿಟ್ಟಿದ್ದಳು. ಬಳಿಯಲ್ಲಿ ಮಣೆಯನ್ನು ಹಾಕಿದಳು. ಮುಖವನ್ನು ತೊಳೆದುಕೊಳ್ಳಲಿಕ್ಕೆ ನೀರು ತಂದಿರಿಸಿದಳು. ಶಾಮನು ರಮಾಬಾಯಿಯ ಹೇಳಿಕೆಯಂತೆ ಕೈಕಾಲು ತೊಳೆದುಕೊಂಡು ಬಂದು, ಮಣೆಯ ಮೇಲೆ ಕುಳಿತು, ಬಳಿಯಲ್ಲಿ ನಿಂತಿದ್ದ ಚಂದ್ರಿಕೆಯ ಮೋರೆಯ ಕಡೆ ನೋಡಿದನು. ದೃಷ್ಟಿ ಸಮ್ಮೇಲನವಾಯಿತು. ಸಂಬಂಧವು ಎಷ್ಟೇ ದೂರದ್ದಿರಲಿ, ಶಾಮನು ಚಂದ್ರಿಕೆಯ ಅಣ್ಣನಾಗಿದ್ದನು. ಈ ವರೆಗಿನ ಮಾತುಕಥೆಗಳಲ್ಲಿ ಈ ಭಾವವನ್ನು ಕಾಯ್ದುಕೊಂಡಿದ್ದನು; ಹಾಗು ಚಂದ್ರಿಕೆಯ ಜೀವನದ ಸರ್ವೋಚ್ಚ ಇಷ್ಟಸಾಧಕನೆಂದು ಸ್ವೇಚ್ಛೆಯಿಂದ ಹೇಳಿಕೊಂಡು, ಬಾಹ್ಯದಲ್ಲಿ ಚಂದ್ರಿಕೆಯ ಪರಮ ಹಿತೈಷಿಯಾಗಿದ್ದನು. ಹೀಗಿದ್ದರೂ ಚಂದ್ರಿಕೆಯು ಆತ್ಮರಕ್ಷಣೆಯ ಸ್ವಾಭಾವಿಕ ಬುದ್ಧಿಬಲದಿಂದಲೇ ಆಗಲಿ, ಮತ್ತೇತರಿಂದಲೇ ಆಗಲಿ, ಶಾಮನು ಶುಭಚಿಂತಕನಲ್ಲವೆಂದು ಗೊತ್ತು ಮಾಡಿಕೊಂಡಿದ್ದಳು. ಈ ಏಕದೃಷ್ಟಿಯಲ್ಲಿ ಅವಳು ಶಾಮನ ಅಂತರ್ಭಾವವನ್ನರಿತಳು-ಈ ನೋಟದಲ್ಲಿ ಕರುಣೆ ಅಥವಾ ಉಪಕಾರದ ವೃತ್ತಿಯಿರದೆ, ಅವನ ಮಾತಿಗೆ ತೀರ ವಿರೋಧವಿದ್ದ ಒಂದು ಭಾವನೆಯು ಅಡಗಿಕೊಂಡಿದೆಯೆಂಬ ಸಂದೇಹವು ಅವಳಿಗುಂಟಾಯಿತು; ಕೂಡಲೆ ಅವಳು ತನ್ನ ದೃಷ್ಟಿಯನ್ನು ಕೆಳಗೆ ಚಲ್ಲಿದಳು.

ಚಂದ್ರಿಕೆಯು ಉಪಾಹಾರದ ಪದಾರ್ಥಗಳನ್ನು ಕೊಡುವಾಗ್ಗೆ ಶಾಮನು ಅವಳ ಮುಖದ ಕಡೆಗೆ ನೋಡುತ್ತಿದ್ದನು. ಅವನು ರಮಾಬಾಯಿಯೊಡನೆ ಹರಟೆ ಹೊಡೆಯುತ್ತ ಚಂದ್ರಿಕೆಯ ಮುಖಭಾವವನ್ನು ನಿರೀಕ್ಷಿಸುತ್ತ ವಿನೋದದಿಂದ ಉಪಾಹಾರವನ್ನು ತಕ್ಕೊಳ್ಳುತ್ತಿದ್ದನು. ಈ ಸಮಯದಲ್ಲಿ ಒಮ್ಮೊಮ್ಮೆ ಚಂದ್ರಿಕೆಯ ಮೋರೆಯ ಮೇಲೆ ರಮಾಬಾಯಿ ಹಾಗು ಶಾಮ ಇವರಿಬ್ಬರ ದೃಷ್ಟಿಗಳು ಏಕತ್ರಿತವಾಗುತ್ತಿದ್ದವು. ಆದರೂ ರಮಾಬಾಯಿಗೆ ಶಾಮನ ಅಂತರಿಕ ಭಾವನೆಯು ಹೊಳೆಯಲಿಲ್ಲ. ಶಾಮನ ಅಂತಃಕರಣದಲ್ಲಿ ಲಾಲಸೆಯ ಹಾಗು ಶಠತೆಯ ರಾಸಾಯನಿಕ ಕ್ರಿಯೆಯು ನಡೆದಾಗ, ರಮಾಬಾಯಿಯು ಅಲ್ಲಿ ಸಹಾನುಭೂತಿಯೂ, ಪರದುಃಖಕಾತರತೆಯೂ ತುಂಬಿಕೊಂಡಿವೆ

ಯೆಂದು ಭಾವಿಸುತ್ತಿದ್ದಳು.

ರಮಾಬಾಯಿಯು ಗೋವಿಂದರಾಯನು ಆಫೀಸಿನಿಂದ ಮನೆಗೆ ಬರುವ ವರೆಗೆ ಶಾಮನನ್ನು ಬಿಡಲಿಲ್ಲ. ಶಾಮನಿಗಾದರೂ ಇದೇ ಬೇಕಾಗಿತ್ತು. ಶಾಮನು ಗೋವಿಂದರಾಯನೊಡನೆ ಹರಟೆಯನ್ನು ಹೂಡಿದನು. ಗೋವಿಂದ ರಾಯನು ಶಾಮನ ಮಾತು ಕೇಳಿ ಅಂದದ್ದು:—"ನೀನು ಆ ಪಾಷಂಡರನ್ನು ಹಾದಿಗೆ ತರಬಹುದೆಂದು ನನಗೆ ಅನಿಸುವದಿಲ್ಲ. ಆದರೂ ಸ್ವಾಮಿರಾಯನು ನಿನ್ನ ಸ್ನೇಹಿತನೆಂದು ಅನ್ನುತ್ತಿರುವದರಿಂದ ಒಮ್ಮೆ ಪ್ರಯತ್ನ ಮಾಡಿ ನೋಡೆಂದು ನಾನು ಹೇಳುತ್ತೇನೆ. ನಾನಾದರೋ ತಂದೆಯಂತೆ ಮಗನೂ ಇರುವನೆಂದು ಮನಗಂಡಿರುವದರಿಂದ ತುಂಬ ನಿರಾಶನಾಗಿದ್ದೇನೆ."

ಶಾಮನು ಕುಳಿತಿದ್ದ ಕೋಣೆಯ ಹೊರಬದಿಯಲ್ಲಿ ಚಂದ್ರಿಕೆಯು ನಿಂತುಕೊಂಡು ಮಾತುಗಳನ್ನು ಕೇಳುತ್ತಿರುವಳೆಂಬದನ್ನು ಕಣ್ಣುಗಳಿಂದ ನೋಡಿರದಿದ್ದರೂ ಧೂರ್ತತೆಯಿಂದ ಅರಿತವನಾಗಿದ್ದನು. ಅವನು ಹೊರಗೆ ಕೇಳುವಂತೆ ಗಟ್ಟಿಯಾಗಿ ಹೇಳಿದ್ದು:—"ಕಾಕಾ, ಶಿವರಾಯನ ವಿಷಯದಲ್ಲಿ ನೀವು ಏನೇ ಅಂದುಕೊಳ್ಳಿರಿ; ನಾನು ಬೇಡೆನ್ನುವದಿಲ್ಲ; ಆದರೆ ಸ್ವಾಮಿ ರಾಯನು ನನ್ನ ಮಿತ್ರನು. ಅವನನ್ನು ನಾನು ಬಾಲ್ಯಕಾಲದಿಂದಲೂ ಬಲ್ಲೆನು. ಅವನು ಸ್ವೇಚ್ಛೆಯಿಂದ ಈ ಕೆಲಸವನ್ನೆಂದಿಗೂ ಮಾಡನು. ಅವನು ಸ್ವಾತಂತ್ರ್ಯ ದೊರೆತೊಡನೆಯೇ ತನ್ನ ತಪ್ಪನ್ನು ಸುಧಾರಿಸಿಕೊಳ್ಳದೆ ಬಿಡನು."

ಗೋವಿಂದರಾಯನು ಮನಸ್ಸಿನಲ್ಲಿಯೇ ನಕ್ಕು ಅಂದದ್ದು:—"ಹೀಗಿದ್ದರೆ ಒಳಿತೇ ಆಯಿತು. ಪ್ರಯತ್ನ ಮಾಡು. ಜಯಶಾಲಿಯಾದರೆ ಒಬ್ಬ ಕೋಮಲ ಬಾಲಿಕೆಯ ಕಲ್ಯಾಣ ಮಾಡಿದ ಪುಣ್ಯ ಬರುವದು; ಆದರೆ ಈ ಅನುಸಂಧಾನದಲ್ಲಿ ನನ್ನ ಹೆಸರನ್ನು ಮುಂದೆ ತರಬೇಡ; ಯಾಕಂದರೆ, ನಾನು ಆ ದುಷ್ಟ ಶಿವರಾಯನ ಸಂಗಡ ಇನ್ನೆಂದೂ ಮಾತಾಡಲಿಕ್ಕಿಲ್ಲೆಂದು ಪಣ ಮಾಡಿದ್ದೇನೆ! ಹೊಲೆಯನವನು! ಅವನ ಮುಖದರ್ಶನವು ನನಗೆ ಬೇಡ!"

ಶಾಮನು ನಕ್ಕು ಅಂದದ್ದು:—"ತಮ್ಮ ಸಂಬಂಧವಿಲ್ಲದಂತೆ ನಾನು ಪ್ರಯತ್ನ ನಡೆಸುವೆನು; ಆದರೆ ಇದಕ್ಕೆ ಬಹಳ ಕಾಲ ಬೇಕೆಂಬದನ್ನು ನಾನು ಹೇಳಬೇಕೆಂಬ ಹಾಗೇನೂ ಇಲ್ಲ. ತಾವು ಮಾತ್ರ ನಾನು ಸುಮ್ಮನೆ ಕುಳಿತಿರುವೆನೆಂದು ಭಾವಿಸಲಾಗದು."

ಗೋವಿಂದರಾಯನು ಇಂತು ಹೇಳಿದನು:—"ಸಾವಕಾಶವಾಗಿಯೇ ಆಗಲಿ, ನನಗೆ ಆಶೆಯೇ ಇಲ್ಲ; ಅಂದಬಳಿಕ ಬೇಗ ಏಕೆ ಆಗಲೊಲ್ಲದು? ಎಂದು ಚಡಪಡಿಸುವ ಪ್ರಸಂಗವೇ ಇಲ್ಲ."

ಶಾಮನು ಪುನಃ ನುಡಿದದ್ದು:—"ನೀವು ಕೆಲಸವಾಗುವದಿಲ್ಲವೆಂದು ಭಾವಿಸಿ, ಸಾಕಷ್ಟು ಸಮಯವನ್ನು ಕೊಡುತ್ತಿರುವದನ್ನು ನೋಡಿದರೆ, ನಾನು ಈ ಕೆಲಸದಲ್ಲಿ ನಿಶ್ಚಿತವಾಗಿ ಜಯಶಾಲಿಯಾಗುವೆನೆಂದು ನನಗನಿಸುತ್ತದೆ."

ಶಾಮನು ಗೋವಿಂದರಾಯನ ಆಗ್ರಹದಿಂದ ಮತ್ತೆ ಚಹಾ-ಉಪಹಾರಗಳನ್ನು ತಕ್ಕೊಂಡು, ಎಲ್ಲರ ಅಪ್ಪಣೆಯನ್ನು ಪಡೆದು ಹೊರಬಿದ್ದನು. ಕೈಕೊಂಡ ಕೆಲಸದಲ್ಲಿ ಮೊದಲಿನ ದಿವಸವೇ ಆಶಾತೀತ ಫಲವು ಫಲಿಸಿದುದನ್ನು ನೋಡಿ, ಸಂತೋಷದಿಂದ ತನ್ನ ವಾಸಸ್ಥಳದ ಕಡೆಗೆ ಸಾಗಿದನು.

---

## ೬

ಮರುದಿನ ಮುಂಜಾನೆ ಶಾಮನು ತಾನು ಹಾಕಿಕೊಟ್ಟ ಕಿತ್ತಿಯನ್ನೇ ತೀಡಬಹುದಾಗಿದ್ದ ತನ್ನೊಬ್ಬ ಗೆಳೆಯನ ಬಳಿಗೆ ಹೋದನು. ಈ ಮಿತ್ರನು ಕಪರ್ದಿಕ ರಹಿತನಾದರೂ ಇವನ ಹೆಸರು ಕುಬೇರನೆಂದಿತ್ತು. ಕುಬೇರನು ಮನೆಯೊಳಗೆ ಇದ್ದನು. ಶಾಮನ ಕೂಗ ಕೇಳಿ ಹೊರಗೆ ಬಂದು ನಗೆಮೊಗದಿಂದ "ಏನು ರಾಯರೇ, ಈ ಬೆಳಗಿನಲ್ಲಿ ಬರೋಣವಾಯಿತು! ಕೆಲಸವೇನು?" ಎಂದು ಕೇಳಿದನು.

ಶಾಮನು ಪ್ರತ್ಯುತ್ತರವಾಗಿ ನಕ್ಕು ಅಂದದ್ದು:—"ನಿನ್ನ ಬಳಿಯಲ್ಲಿಯೇ ಕೆಲಸವಿದೆ. ನಿನ್ನನ್ನು ಸಾಹುಕಾರನನ್ನಾಗಿ ಮಾಡಬೇಕಾಗಿದೆ."

"ತಾಯಿ-ತಂದೆಗಳು ಈ ಭವಿಷ್ಯವನ್ನರಿತೇ ನನ್ನ ಹೆಸರನ್ನಿಟ್ಟಿದ್ದರೂ ಇಟ್ಟಿರಬಹುದು! ನನ್ನನ್ನು ಹೇಗೆ ಸಾಹುಕಾರರನ್ನಾಗಿ ಮಾಡುವೆ? ಹೇಳು ನೋಡೋಣ!"

"ಚೇಷ್ಟೆಯಲ್ಲ! ಕೇವಲ ಮಹತ್ವದ ಕೆಲಸಕ್ಕಾಗಿ ಈ ನಸುಕಿನಲ್ಲಿ ನಿನ್ನ ಹತ್ತಿರ ಬಂದಿದ್ದೇನೆ. ನಿನ್ನೊಡನೆ ಏಕಾಂತದಲ್ಲಿ ಮಾತಾಡಬೇಕಾಗಿದೆ. ಎಲ್ಲಿ ಕುಳ್ಳಿರೋಣ?"

ಕುಬೇರನು ಸೂಚಿಸಿದ ಕೋಣೆಯಲ್ಲಿ ಕುಳಿತು, ಇಬ್ಬರೂ ಅರ್ಧ ತಾಸಿನವರೆಗೆ ಮಾತಾಡಿಕೊಂಡರು; ಮುಂದಿನ ಕಾರ್ಯಕ್ರಮವನ್ನು ಗೊತ್ತು ಮಾಡಿಕೊಂಡರು. ಹೋಗುವಾಗ್ಗೆ ಶಾಮನು:-"ಈಗಲೇ ಹೊರಡು. ನಾನು ಸಾಯಂಕಾಲದಲ್ಲಿ ಮತ್ತೆ ನಿನ್ನ ಬಳಿಗೆ ಬರುವೆನು" ಎಂದು ಹೇಳಿದನು.

ಮಿತ್ರನಿಗೆ ಮಾತು ಕೊಟ್ಟಂತೆ ಕುಬೇರನು ಹನುಮಂತನಾಯಿಕನ ಮನೆಗೆ ಹೋದನು. ಪಡಸಾಲೆಯಲ್ಲಿ ಒಬ್ಬ ಹುಡುಗನು ಓದುತ್ತ ಕುಳಿತಿ

ದ್ದನು. ಕುಬೇರನು ಹೋಗಿ ಕುಳಿತು 'ನಾಯಿಕರನ್ನು ಹೊರಗೆ ಕಳುಹಿ ಕೊಡು' ಎಂದು ಆ ಹುಡುಗನಿಗೆ ಹೇಳಿದನು. ನಾಯಿಕನು ಹೊರಗೆ ಬಂದನು. ಕುಬೇರನು ಅವನಿಗೆ ನಮಸ್ಕಾರ ಮಾಡಿ 'ಕೆಲಸದಲ್ಲಿದ್ದ ತಮಗೆ ತೊಂದರೆ ಕೊಡಬೇಕಾಯಿತು ಕ್ಷಮಿಸಿರಿ' ಎಂದು ಅಂದನು. ಹನುಮಂತನಾಯಿಕನು ಅವನ ವೇಷ-ಭೂಷಣಗಳನ್ನು ನೋಡಿ:-"ನೀವು ಯಾರು? ಯಾಕೆ ಬಂದಿರುವಿರಿ?" ಎಂದು ಕೇಳಿದನು.

"ಕುಳಿತುಕೊಳ್ಳಿರಿ. ನಿಮ್ಮೊಡನೆ ಬಹಳವಾಗಿ ಮಾತಾಡಬೇಕಾಗಿದೆ. ಜನರು ನನ್ನನ್ನು ಕುಬೇರಪ್ಪನೆಂದು ಕರೆಯುತ್ತಿದ್ದಾರೆ. ಹಿರಿಯರು ಗಳಿಸಿಟ್ಟ ಹಣವು ಯಥೇಷ್ಟವಾಗಿರುವದರಿಂದ ಉಪಜೀವನಕ್ಕಾಗಿ ಬೇರೆ ಯಾವ ಹೋರೆಯನ್ನೂ ಮಾಡಬೇಕಾಗಿಲ್ಲ."

ಹನುಮಂತನಾಯಿಕನು ಕುಳಿತುಕೊಂಡು ಅಂದದ್ದು:—"ನಿಮ್ಮ ಕೆಲಸವು ಯಾವುದೆಂಬದನ್ನು ಹೇಳಿರಿ. ನಿರರ್ಥಕವಾಗಿ ಮಾತಾಡುತ್ತ ಕುಳ್ಳಿರಲಿಕ್ಕೆ ನನಗೆ ಅವಕಾಶವಿಲ್ಲ. ಈ ಪ್ರಸಂಗದಲ್ಲಿ ನಾನು ನಿಮಗೆ ಒಂದು ಸೂಚನೆ ಮಾಡಬೇಕಾಗಿದೆ. ಅದೇನಂದರೆ. ಲಾಯಿಫ ಇನ್ಸುರನ್ಸ ಕಂಪನಿಯ ಏಜಂಟರೊಡನೆಯೂ, ಸಂಸ್ಥೆಗಳ ಚಾಲಕರೊಡನೆಯೂ ನಾನು ಸಂಬಂಧವಿಡಲಿಚ್ಛಿಸುವದಿಲ್ಲ. ನೀವು ಇವೆರಡರಲ್ಲೊಂದು ಕಾರ್ಯವನ್ನು ಕೈಕೊಂಡಿದ್ದರೆ ಮುಂದೆ ಮಾತಾಡುವ ಕಾರಣವೇ ಇಲ್ಲ. ನಮಸ್ಕಾರ, ಹೋಗಿ ಬನ್ನಿರಿ."

"ನೀವು ಸೂಚಿಸಿದ ಕೆಲಸಗಳಿಗಾಗಿ ನಾನು ಬಂದವನಲ್ಲ. ನನ್ನ ಕೆಲಸವು ಇವುಗಳಿಂದ ಬೇರೆಯಾಗಿದೆ."

"ಹಾಗಾದರೆ ಕನ್ಯಾದಾಯಗ್ರಸ್ತರ ವಕಾಲತ ಮಾಡಕ್ಕೆ ಬಂದಿರುವಿರಾ? ನಮ್ಮ ಸಮಾಜದಲ್ಲಿ ಈ ಜನರ ಸಂಖ್ಯೆಯೂ ಹೆಚ್ಚುತ್ತಲಿದೆ. ಲಕ್ಷ್ಮೀಪುತ್ರರಾದ ವರಪಿತರಿಗೆ ಈ ಜನರ ಪೀಡೆಯು ಅಸಹ್ಯವಾಗುತ್ತ ನಡೆದಿದೆ! ನಾನು ಇಂಥವರೊಡನೆಯೂ ಮಾತಾಡುವದಕ್ಕೆ ಮನಸ್ಸಿಲ್ಲದವನಾಗಿದ್ದೇನೆ."

ಕುಬೇರನು ನಕ್ಕು ಹೇಳಿದನು:— 'ನಾನು ನೀವು ಹೇಳಿದಂತೆ ವಕೀಲಿಯನ್ನು ಮಾಡಬಂದವನೂ ಅಲ್ಲ. ಕನ್ಯಾಪಿತರು ಬಡವರಾಗಿದ್ದರೂ ಶ್ರೀಮಂತರೊಡನೆ ಶರೀರಸಂಬಂಧ ಬಳಿಸಬೇಕೆಂದು ಇಚ್ಛಿಸುವದು ಮನುಷ್ಯಸ್ವಭಾವಕ್ಕೆ ವಿರೋಧ ಮಾತಲ್ಲ; ಆದರೆ ಈ ವಿಷಯದಲ್ಲಿ ಶ್ರೀಮಂತರು ಶಾಶ್ವತಿಗೋಸುಗ ಅವರಿಗೆ ತುಂಬಾ ತಾಪವಾಗುತ್ತದೆ. ಈ ಮನಸ್ತಾಪದಿಂದ ದೂರಿರುವದಕ್ಕೋಸುಗ ನಾನು ಹೆಣ್ಣು ಹಡೆದಿಲ್ಲವಿಷ್ಟೇ ಅಲ್ಲ; ನನ್ನ ಬಂಧು

ಬಾಂಧವರಿಗೂ ಆಪ್ತೇಷ್ಟರಿಗೂ ಕನ್ಯಾಪಿತರಾಗದಂತೆ ಕಟ್ಟೆಪ್ಪಣೆ ಮಾಡಿದ್ದೇನೆ!'

"ನಿಮ್ಮ ಮಾತು ಕೇಳಿ ನನಗೆ ನಗೆ ಬರುತ್ತದೆ. ಇರಲಿ, ಇನ್ನು ಹರಟೆಯ ಮಾತು ಸಾಕು. ಮುಖ್ಯ ಸಂಗತಿಯ ಕಡೆಗೆ ಹೊರಳಿರಿ"

"ನಾಯಿಕರೆ, ಮೊದಲು ನೀವಾಗಿಯೇ ಹಾಗೆ ಮಾತಾಡತೊಡಗಿದ್ದರಿಂದ ನಾನು ಹೀಗೆ ಮಾತಾಡಬೇಕಾಯಿತು. ಇನ್ನು ಕೆಲಸವನ್ನು ಹೇಳುತ್ತೇನೆ ಕೇಳಿರಿ. ಕನ್ಯಾದಾಯಗ್ರಸ್ತರಿಂದ ಗ್ರಸ್ತರಾದ ನಿಮಗೆ ಲಾಭದ ದಾರಿಯನ್ನು ತೋರಿಸಿ ಕೊಡಲು ನಾನು ನಿಮ್ಮ ಬಳಿಗೆ ಬಂದಿದ್ದೇನೆ."

"ಬಹಳ ಗೂಢವಾಗಿ ಮಾತಾಡಿದಿರಿ! ನನಗೇನೂ ಹೊಳೆಯುಲಿಲ್ಲ! ಸರಳವಾಗಿ ಮಾತನಾಡಿರಿ."

"ನಿಮ್ಮ ಸ್ನೇಹಿತನಾದ ಗೋವಿಂದರಾಯನು ಮಗಳ ವಿವಾಹಕ್ಕೋಸುಗ ನಿಮ್ಮ ಬಳಿಯಲ್ಲಿ ಮೂರುಸಾವಿರ ರೂಪಾಯಿಗಳನ್ನು ಸಾಲತಕ್ಕೊಂಡಿರುವನೆಂದೂ ನಿಮಗೀಗ ಹಣದ ಅಡಚಣೆಯಿದ್ದರೂ, ಆ ದುಡ್ಡು ಕೂಡಲೇ ವಸೂಲಾಗುವದು ಸಾಧ್ಯವಿಲ್ಲೆಂದೂ ನಾನು ಕೇಳಿದ್ದೇನೆ. ನಿಜವೇ?"

"ಅಹುದು."

"ಅಸಲಿನಲ್ಲಿ ಬಡ್ಡಿಯು ಕೂಡಿ, ಈಗ ಗೋವಿಂದರಾಯರಿಂದ ನಿಮಗೆ ನಾಲ್ಕು ಸಾವಿರ ರೂಪಾಯಿಗಳು ಬರಬೇಕಾಗಿವೆಯಷ್ಟೇ?"

"ನಿಜ."

"ಹಣದ ಪೇಚಿನಲ್ಲಿ ಸಿಕ್ಕ ನೀವು ಆ ನಿಮ್ಮ ಗೆಳೆಯನ ಮೇಲೆ ದಾವೆಯನ್ನು ಮಾಡತಕ್ಕವರಿರುವಿರಷ್ಟೇ?"

"ಈ ಸಂಗತಿಯನ್ನು ನಿಮಗೆ ಹೇಳಿದವರಾರು?"

"ಯಾರೇ ಹೇಳಿರಲಿ, ದಾವೆಯನ್ನು ಮಾಡುವ ಮನಸ್ಸು ಮಾಡಿದ್ದ ನೀವು ಉಭಯವಿಧ ಸಂಕಟಗಳಲ್ಲಿ ಸಿಕ್ಕಿಕೊಂಡಿರುವದು ಸ್ವಾಭಾವಿಕವು."

"ಅದೇಕೆ?"

"ಮಿತ್ರನ ಮೇಲೆ ಹೇಗೆ ದಾವೆಯನ್ನು ಮಾಡಬೇಕೆಂಬುದು ಒಂದು ವಿಚಾರ. ಈ ಆಪತ್ತಿಯನ್ನು ಲಕ್ಷಿಸದೆ ಕೋರ್ಟಿನ ಆಶ್ರಯವನ್ನು ತಕ್ಕೊಂಡರೂ ಬೇಗ ಹಣ ವಸೂಲಾಗುವ ಸಂಭವವಿಲ್ಲ. ಮೇಲಾಗಿ ಇದಕ್ಕೋಸುಗ ಯಾತಾಯಾತವೂ, ನೀರಲ್ಲಿ ಚಲ್ಲಿದ ದುಡ್ಡನ್ನು ಮೇಲ್ತೆಗೆಯುವದಕ್ಕೋಸುಗ ಮೊದಲು ನೀರಲ್ಲಿ ಮತ್ತಿಷ್ಟು ದುಡ್ಡು ಚೆಲ್ಲಬೇಕಾದುದೂ ಅನಿವಾರ್ಯವಾದುದು. ನಾಯಿಕರೇ, ಕೋರ್ಟಿನ ಸುಖವನ್ನು ಏನೆಂದು ಹೇಳಲಿ? ಸಂಭಾವಿತರಾದ ನೀವು ಸಾಲಿಗರು ವಚನಭ್ರಷ್ಟರಾದರೂ ಇದು ವರೆಗೆ ಕಚೇರಿಯ

ಕಟ್ಟೆಯನ್ನೇರಿದವರಲ್ಲ. ಕಾರಣ ನಿಮಗೆ ಕೋರ್ಟಿನ ಅನುಭವವು ಸಾಕಷ್ಟು ಇರುವ ಸಂಭವವಿಲ್ಲ. ಮೊದಲು ವಕೀಲರ ಮನೆಗೆ ಮೊಚ್ಚೆ ಹರಿಯುವ ವರೆಗೆ ಅಲೆಯಬೇಕು; ವಕೀಲರು ಅಂದದ್ದು ಅನಿಸಿಕೊಂಡು ಬೇಡಿದಷ್ಟು ದುಡ್ಡು ಕೊಡಬೇಕು. ಪುರಾವೆಗಳನ್ನು ಒದಗಿಸಿ ಕೊಡಬೇಕು. ಸಾಕ್ಷೀದಾರರ ಕಾಲು ಕಟ್ಟಿಕೊಂಡು ಕರೆತಂದು ಕೋರ್ಟಿನಲ್ಲಿ ಹಾಜರಪಡಿಸಬೇಕು. ಬೇಲೀಫರ ಮರ್ಜಿ ಕಾಯ್ದು ಪ್ರತಿವಾದಿಗೆ ಸಮನ್ಸ ಜಾರಿ ಮಾಡಿಸಬೇಕು. ಇಷ್ಟೆಲ್ಲ ಮಾಡಿದಾಗ ನ್ಯಾಯಾಧೀಶರ ತೀರ್ಮಾನವಾಗುವದು. ಆ ತೀರ್ಮಾನದಂತೆ ಹಣ ನಿಮ್ಮ ಕೈಸೇರಬೇಕಾದರೆ, ಮತ್ತೆ ಮೊದಲಿಗಿಂತ ಹೆಚ್ಚು ಖಟಾಟೋಪ ಮಾಡಬೇಕಾಗುವದು. ಅರ್ಥಾತ್ ನಿಮ್ಮ ಹಣವು ನಿಮಗೆ ಬರಬೇಕಾದರೆ, ದಗದಗಿಯಲ್ಲಿ ಕನಿಷ್ಟಪಕ್ಷಕ್ಕೆ ಎರಡು ವರುಷಗಳನ್ನು ಕಳೆಯಬೇಕು."

"ಚಿಂತಾಗ್ರಸ್ತನಾಗಿದ್ದ ನನಗೆ ಹೆಚ್ಚು ಭಯವುಂಟಾಗುವಂತೆ ಮಾಡಬೇಡಿರಿ. ಕೋರ್ಟಿನ ವತಿಯಿಂದ ಹಣವನ್ನು ವಸೂಲ ಮಾಡುವದು ತಾಪದಾಯಕವೇನೋ ನಿಜ; ಆದರೆ ಉಪಾಯವಿಲ್ಲದಾಗಿದೆ. ನೀವೇನಾದರೂ ಹಂಚಿಕೆ ಹೇಳಿಕೊಡುತ್ತಿದ್ದರೆ ಹೇಳಿರಿ."

"ಗೋವಿಂದರಾಯನಲ್ಲಿ ಜಂಗಮ ಆಸ್ತಿಯಂತೂ ಇಲ್ಲವೇ ಇಲ್ಲ. ಸ್ಥಾವರ ಆಸ್ತಿಯೆಂದರೆ ಕೇವಲ ಒಂದು ಮನೆ. ಆ ಮನೆಯನ್ನು ಮತ್ತೆ ಯಾರಿಗಾದರೂ ಬರೆದು ಕೊಟ್ಟಿದ್ದರೆ ನೀವು ಮಾಡುವುದೇನು? ಈಗ ಕೊಟ್ಟಿದ್ದ ಹಣ ಹಾಗು ಅದರ ಬಡ್ಡಿ ಈ ರಕಮಿನೊಡನೆ ಕೋರ್ಟಖರ್ಚಿಗೂ ತಿಲಾಂಜಲಿಯನ್ನು ಕೊಡಬೇಕು. ಇಲ್ಲವೆ ಉಂಟಾಗಿದ್ದ ಹೊಟ್ಟೆಯ ಉರಿಯ ಮೂಲಕ ಸ್ನೇಹಿತನ ಮೇಲೆ ತುರಂಗವಾರಂಟು ತೆಗಿಸಿ, ಮಿತ್ರನನ್ನು ಸೆರೆಮನೆಯಲ್ಲಿರಿಸಿ, ಕೈಖರ್ಚಿನಿಂದ ಆವನ ಹೊಟ್ಟೆಗೆ ಹಾಕಬೇಕು!...."

ಹನುಮಂತನಾಯಕನು ಅವನಿಗೆ ಮುಂದೆ ಮಾತಾಡಗೊಡದೆ ಸಿಟ್ಟಿನಿಂದ ಹೇಳತೊಡಗಿದನು-"ನಿಮ್ಮ ಉದ್ದೇಶವೇನೆಂಬುದೇ ನನಗೆ ತಿಳಿಯಲೊಲ್ಲದು! ನಾನು ನನ್ನಲ್ಲಿಯ ಪ್ರಾಮಿಸರಿ ನೋಟನ್ನು ಹರಿದು ನಿಮ್ಮ ಕೈಯಲ್ಲಿ ಕೊಡಬೇಕು, ನೀವದನ್ನು ತಕ್ಕೊಂಡು ಹೋಗಿ ಗೋವಿಂದರಾಯನಿಗೆ ತೋರಿಸಬೇಕು, ಎಂದು ನಿಮ್ಮ ಮನಸ್ಸಿನಲ್ಲಿದೆಯೆ?"

ಕುಬೇರನು ಮೆಲ್ಲನೆ ನಕ್ಕು ಹೇಳಿದ್ದು—"ನಾಯಿಕರೆ, ಕೋಪಗೊಳ್ಳಬೇಡಿರಿ. ನನ್ನ ಮಾತುಗಳನ್ನು ಸಂಪೂರ್ಣವಾಗಿ ಶಾಂತತೆಯಿಂದ ಕೇಳಿಕೊಳ್ಳಿರಿ. ಅಂದರೆ ನಾನು ನಿಮ್ಮ ಹಿತಕರ್ತನೆಂದೂ, ನಿಮಗೆ ಲಾಭ ಮಾಡಿ

ಕೊಡುವದಕ್ಕಾಗಿ ಇಲ್ಲಿಗೆ ಬಂದಿರುವೆನೆಂದೂ ಮನವರಿಕೆಯಾಗುವದು. ನನಗೆ ನಿಮ್ಮಲ್ಲಿಯ ಪ್ರಾಮಿಸರಿನೋಟು ಬೇಕಾಗಿದೆ; ಆದರೆ ನಾನು ಅದನ್ನು ನೀವು ಹೇಳಿದ ರೀತಿಯಿಂದ ಒಯ್ಯಬಂದವನಲ್ಲ. ನಿಮಗೆ ಮುಟ್ಟತಕ್ಕ ಯಾವತ್ತು ರಕಮನ್ನು ಮುಟ್ಟಿಸಿ, ಬಳಿಕ ಆ ಪ್ರಾಮಿಸರಿ ನೋಟ ತೆಗೆದುಕೊಳ್ಳುವೆನು."

"ನೀವು ಆ ಹಣವನ್ನು ಹೇಗೆ ಪೇಡ ಮಾಡುವಿರಿ?" ಎಂದು ನಾಯಿಕನು ವಿಸ್ಮಯದಿಂದ ಕೇಳಿದನು.

"ಆ ಶಕ್ತಿಯು ನನ್ನಲ್ಲಿಲ್ಲವೆಂದು ತಿಳಿದಿರುವಿರಾ? ನಾನು ನಿಮ್ಮಲ್ಲಿಗೆ ಬಂದುದು ಇದಕ್ಕಾಗಿಯೇ. ನೀವು ಒಪ್ಪುತ್ತಿದ್ದರೆ ತಿಳಿಸಿರಿ. ಇಂದು ಸಾಯಂಕಾಲದಲ್ಲಿ ನಿಮ್ಮ ಹಣವನ್ನು ತಂದು ಕೊಡುವೆನು."

"ನೀವು ಆ ನೋಟನ್ನು ತಕ್ಕೊಳ್ಳ ಬಯಿಸುವಿರಾ?"

"ಹೌದು."

"ನಿಜವೆ?"

"ನಿಶ್ಚಿತವಾಗಿ ಹೇಳುತ್ತೇನೆ."

'ನೀವು ಪರಿಹಾಸ ಮಾಡುತ್ತಿರುವಿರೆಂದು ನನಗೆ ಸಂದೇಹವುಂಟಾಗಿದೆ.'

"ನಿಮ್ಮೊಡನೆ ಪರಿಹಾಸವೇ? ಅಷ್ಟೊಂದು ಘನಿಷ್ಠ ಸಂಬಂಧವು ನಮ್ಮಿಬ್ಬರಲ್ಲಿ ಇಲ್ಲವೆಂಬುದು ನಿಮಗೆ ಗೊತ್ತಿದ್ದ ಸಂಗತಿಯಾಗಿದೆ."

ಹನುಮಂತನಾಯಿಕನ ಬಾಯಿಂದ ಮಾತು ಹೊರಡಲಿಲ್ಲ. ಅವನು ಆಶ್ಚರ್ಯಸೂಚಕ ಮುಖಭಾವದಿಂದ ಕುಬೇರನನ್ನು ನೋಡುತ್ತ ಸುಮ್ಮನೆ ಕುಳಿತನು. ಕುಬೇರನು ಹೇಳತೊಡಗಿದನು:—"ನಾಯಿಕರೇ, ಗೋವಿಂದ ರಾಯನಿಂದ ಹಣ ವಸೂಲ ಮಾಡುವದಕ್ಕಿರುವ ಆಪತ್ತುಗಳನ್ನೆಲ್ಲ ನಾನು ನಿಮಗೆ ವಿವರಿಸಿ ಹೇಳಿದೆನು. ಆ ವಿಪತ್ತುಗಳನ್ನು ತಿಳಿದೂ ತಿಳಿದೂ ನಾನು ನನ್ನ ಮೈ ಮೇಲೆ ಹಾಕಿಕೊಳ್ಳಲಿಕ್ಕೆ ಸಿದ್ಧನಾಗಿದ್ದೇನೆ. ಇದನ್ನು ನೋಡಿ ನಿಮಗೆ ಆಶ್ಚರ್ಯವಾಗುತ್ತಿದೆಯಲ್ಲವೆ? ಮೇಲಾಗಿ ಇದು ಅಸಂಭವವೆಂದೂ ನಿಮಗೆ ಅನಿಸುತ್ತಿರಬಹುದು!"

ಹನುಮಂತನಾಯಿಕನು ಅನುಮಾನಿಸುತ್ತ ಅಂದದ್ದು: "ಅದೇನೂ ಇಲ್ಲ; ಆದರೂ ಒಮ್ಮೊಮ್ಮೆ ಹಾಗೆ ಸಂದೇಹವುಂಟಾಗುತ್ತಿರುವದು." ಬಳಿಕ ಹನುಮಂತನಾಯಕನು ತನ್ನ ಮಗನನ್ನು ಕರೆದು, ಚಹಾ ಸಿದ್ಧಗೊಳಿಸುವಂತೆಯೂ ತಾಂಬೂಲದ ತಟ್ಟೆಯನ್ನು ತಂದು ಕೊಡುವಂತೆಯೂ ಸೂಚಿಸಿ, ಕುಬೇರನನ್ನು ಕುರಿತು:-ನಮ್ಮ ಮನೆಯಲ್ಲಿ ಚಹಾ ತಕ್ಕೊಳ್ಳಲಿಕ್ಕೆ ನಿಮಗೆ ಸಂಕೋಚವುಂಟಾಗದಷ್ಟೆ?" ಎಂದು ಕೇಳಿದನು.

“ಮೂಲತಃ ಜಲವು ಶುದ್ಧವಾದುದು. ಅದು ಮತ್ತೆ ಅಗ್ನಿಯ ಸಂಸ್ಕಾರದಿಂದ ಪರಿಶುದ್ಧವಾದ ಬಳಿಕ ಅದನ್ನು ಸ್ವೀಕರಿಸುವದಕ್ಕೆ ಸಂಕೋಚವೆಲ್ಲಿಯದು? ಇರಲಿ, ನನಗೀಗ ಚಹದ ಆವಶ್ಯಕತೆಯಿಲ್ಲ; ಯಾಕಂದರೆ, ಮನೆಯಲ್ಲಿ ತಕ್ಕೊಂಡೇ ಬಂದಿದ್ದೇನೆ.” ಕುಬೇರನು ತುಸ ಹೊತ್ತು ಸುಮ್ಮನೆ ಕುಳಿತು, ಮುಖದಲ್ಲಿ ಕೃತ್ರಿಮ ಚಿಂತೆಯ ಭಾವವನ್ನು ತಂದುಕೊಂಡು ಅಂದದ್ದು:“ನಾಯಿಕರೇ, ಈ ಪ್ರಸಂಗದಲ್ಲಿ ನಾನು ನಿಮಗೆ ಇನ್ನೊಂದು ಮಾತು ಹೇಳಬೇಕಾಗಿದೆ. ನಮ್ಮ ನಿಮ್ಮ ಈ ವ್ಯವಹಾರವನ್ನು ಯಾರೂ ಅರಿಯದಂತೆ ತಾವು ಕಾಳಜಿಯನ್ನು ತಕ್ಕೊಳ್ಳಲಿಕ್ಕೆ ಬೇಕು.”

“ಹೀಗೆ ಗುಪ್ತವಾಗಿರಿಸುವದಕ್ಕೆ ಕಾರಣವೇನೆಂಬುದನ್ನು ಹೇಳಬಲ್ಲಿರಾ? ನಿಮ್ಮ ಇಚ್ಛೆ ಇಲ್ಲದಿದ್ದರೆ ಬಿಡಿರಿ; ಯಾಕಂದರೆ, ಆ ಕಾರಣವನ್ನು ತಿಳಿಯುವದರಿಂದ ನನಗೇನೂ ಪ್ರಯೋಜನವಿಲ್ಲ.”

“ಸರಿಯಾಗಿ ಮಾತಾಡದಿರಿ. ಕಾರಣವನ್ನು ಹೇಳಲಿಕ್ಕೆ ಯಾವ ಅಡ್ಡಿಯೂ ಇರಲಿಲ್ಲ; ಆದರೆ ನೀವು ಅದನ್ನು ತಿಳಿದುಕೊಳ್ಳುವ ವಿಷಯದಲ್ಲಿ ಉದಾಸೀನರಾಗಿದ್ದ ಬಳಿಕ ನಾನು ವ್ಯರ್ಥವಾಗಿ ಹೇಳಿ ಬಾಯಿ ನೋಯಿಸಿಕೊಳ್ಳಲೇಕೆ?”

“ಬೇಡ ಹೇಳಲೇ ಬೇಡಿರಿ; ಯಾಕಂದರೆ, ಮನುಷ್ಯನ ಬಾಯಿಂದ ಯಾವ ಮಾತು ಯಾವ ಕಾಲಕ್ಕೆ ಹೊರಬಿದ್ದೀತೆಂಬದರ ನಿಯಮವಿಲ್ಲ. ಕಾರಣವನ್ನರಿತುಕೊಂಡು ಅದನ್ನು ಮುಚ್ಚಿಡುವದಕ್ಕಿಂತ ಆ ಕಾರಣವನ್ನು ಕೇಳಿಕೊಳ್ಳದಿರುವದೇ ಒಳಿತೆಂದು ನಾನು ಭಾವಿಸುತ್ತೇನೆ; ಮೇಲಾಗಿ ಆ ಕಾರಣದಿಂದ ನನಗೆ ಲಾಭ-ಹಾನಿಗಳೇನೂ ಆಗುವಂತಿಲ್ಲ. ಅಂದಬಳಿಕ ನಾನೇಕೆ ಆಗ್ರಹವನ್ನು ತೋರಲಿ? ನಿಮ್ಮ ಹೇಳಿಕೆಯಂತೆ ವ್ಯವಹಾರವನ್ನು ಗುಪ್ತವಿಡುವದಕ್ಕೆ ನಾನು ನಿಮಗೆ ವಚನ ಕೊಡುತ್ತೇನೆ.”

ತುಸಹೊತ್ತು ತಡೆದು ಹನುಮಂತನಾಯಿಕನು ಮತ್ತೆ ಹೇಳತೊಡಗಿದನು:-“ಆದಷ್ಟು ಬೇಗ ಈ ವ್ಯವಹಾರವನ್ನು ತೀರಿಸಿ ಬಿಡುವದು ಒಳ್ಳೇದು; ಯಾಕಂದರೆ, ಮನುಷ್ಯನ ಮನಸ್ಸು ಸದಾ ಸ್ಥಿರವಿರುವದೆಂದು ಹೇಳಲಿಕ್ಕಾಗುವದಿಲ್ಲ. ನೂರಾರು ವಿಚಾರಕ್ಕೊಳಗಾಗಿ ನನ್ನ ಮನಸ್ಸು ಈ ವ್ಯಾಪಾರಕ್ಕೆ ಹಿಂಜರಿಯುವ ಸಂಭವವೂ ಉಂಟು!”

“ಈ ಹೆದರಿಕೆ ನಿಮಗೊಬ್ಬರಿಗೇ ಇರುವದೆಂತಲ್ಲ; ನನ್ನ ಮನಸ್ಸು ಹಿಂತೆಗೆಯುವ ಸಂಭವವಿದೆ. ಲಾಭದಾಯಕವಾಗಿದ್ದ ವ್ಯಾಪಾರಕ್ಕೆ ನಿಮ್ಮ ಮನಸ್ಸು

ಅನುಮಾನಿಸುತ್ತಿರುವಾಗ, ಕೈಯಿಂದ ಹಣ ತೆತ್ತು ಹಾನಿ ಮಾಡಿಕೊಳ್ಳುವ ವ್ಯಾಪಾರದಲ್ಲಿ ನನ್ನ ಚಿತ್ತವು ಸ್ಥಿರವಿರುವದೆಂದು ಹೇಳಲಿಕ್ಕಾದೀತೇ?"

"ಬೇಡ. ಇನ್ನು ಹುಡುಗಾಟಿಕೆಯ ಮಾತುಗಳೇ ಬೇಡ. ನಾವಿಬ್ಬರೂ ಈ ವ್ಯಾಪಾರ ಮಾಡುವದಕ್ಕೆ ವಚನಬದ್ಧರಾಗೋಣ" ಎಂದಂದು ಹನುಮಂತನಾಯಿಕನು ಮಗನಿಗೆ ಚಪಾತರುವಂತೆ ಪುನಃ ಆಜ್ಞಾಪಿಸಿದನು.

ಕಾಯ್ದೆಯ ಮೇರೆಗೆ ನೋಟೀಸ ವೊದಲಾದವು ಆಗಿ ಹನುಮಂತನಾಯಿಕನಲ್ಲಿದ್ದ ಪ್ರಾಮಿಸರಿ ನೋಟು ಕುಬೇರನ ಹೆಸರಿನಿಂದ ಖರೀದಿ ಮಾಡಲ್ಪಟ್ಟಿತು.

———

೭

*

ಸಾಯಂಕಾಲವಾಗಿ ಹೋಗಿದೆ; ಆದರೂ ಗೋವಿಂದರಾಯನ ಮನೆಯಲ್ಲಿ ದೀಪ ಹಚ್ಚುವ ಎತ್ತುಗಡೆ ಇಲ್ಲ. ರಮಾಬಾಯಿಯು ಚಂದ್ರಶಾಲೆಯಲ್ಲಿ ಕ್ರಮಶಃ ಹೆಚ್ಚುತ್ತಲಿರುವ ಕತ್ತಲೆಯಲ್ಲಿ ಕುಳಿತು, ತನ್ನ ದುರದೃಷ್ಟವನ್ನು ಹಳಿಮುಕೊಳ್ಳುತ್ತಿದ್ದಾಳೆ. ಚಂದ್ರಿಕೆಯು ಕೋಣೆಯಲ್ಲಿಯ ಹಾಸುಗೆಯ ಮೇಲೆ ಬಿದ್ದುಕೊಂಡು ತಳಮಳಿಸುತ್ತಿದ್ದಾಳೆ. ಇಂದು ಮುಂಜಾನೆ ಕುಬೇರನು ಬಂದು, ಸಾಯಂಕಾಲವಲ್ಲಿ ಸಾಲದ ಹಣವನ್ನು ಸಲ್ಲಿಸದಿದ್ದರೆ ದಾವೆಯ ಮಾಡುವೆನೆಂದು ಗೋವಿಂದರಾಯನಿಗೆ ಬಜಾಯಿಸಿ ಹೋಗಿದ್ದನು.

ಚಂದ್ರಿಕೆಯು ವ್ಯಥಿತಳಾದದ್ದು ತಂದೆಯ ಮೇಲೆ ದಾವೆ ಆಗುವದೆಂಬ ಒಂದೇ ಕಾರಣದಿಂದಲ್ಲ. ತಂದೆಯು ಸಾಹುಕಾರನ ಕಟೂಕ್ತಿಯ ಕಠೋರತೆಯನ್ನು ಸಹಿಸದೆ, ಅಪಮಾನದ ಯಾತನೆಯಿಂದ ಅಂತಃಪುರದಲ್ಲಿ ಉಚ್ಚರಿಸಿದ ಮಾತುಗಳಲ್ಲಿಯ ಕೆಲವು ವಾಕ್ಯಗಳು ಚಂದ್ರಿಕೆಗೆ ಅತಿಶಯ ತಾಪ ಕೊಟ್ಟಿದ್ದವು. ಪಿತನ ಸಂತಾಪದ ಮಾತುಗಳ ಸಾರವಾಗಿ ಅವಳು ಗ್ರಹಿಸಿದ್ದೇನಂದರೆ, ನನ್ನ ದುರ್ದೈವದ ಮೂಲಕ ನಾನು ಎಷ್ಟು ಕಷ್ಟವನ್ನನುಭವಿಸಿರುವೆನೋ ಅದರ ಹತ್ತುಪಟ್ಟು ಕಷ್ಟವನ್ನು ಅನ್ಯರು ಅನುಭವಿಸಿದ್ದಾರೆ, ಭವಿಷ್ಯತ್ಕಾಲದಲ್ಲಿ ಆ ದುರದೃಷ್ಟದ ಮೂಲಕ ನಾನು ಪರಿತಾಪಪಡಬೇಕಾಗಿದ್ದರೆ ಎಷ್ಟೋಪಟ್ಟು ತಾಪವನ್ನು ಹೆರವರು ಹೊಂದಬೇಕು! ಈ ಗ್ರಹಿಕೆಯಿಂದ ಅವಳು ಭಾವಿಸಿದ್ದು:-"ನಾನು ತೀರ ಕೆಟ್ಟ ಮುಹೂರ್ತದಲ್ಲಿ ಈ ಮನೆಯಲ್ಲಿ ಕಾಲಿಟ್ಟಿದ್ದೇನೆ! ತಂತೆಯೇ ನನ್ನ ಸಹವಾಸದಿಂದ ನನ್ನ ಸಹೋದರನು ಹಿರಿಯರು ಸಂಪಾದಿಸಿದ್ದ ಈ ಮನೆಗೆ ಎರವಾಗುವ ಸಮಯ ಬಂದಿದೆ."

ಆಗತಕ್ಕದ್ದು ಆಗಿ ಹೋಗಿತ್ತು. ಅದನ್ನು ತಪ್ಪಿಸುವ ಶಕ್ತಿಯು ಚಂದ್ರಿಕೆಯಲ್ಲಿರಲಿಲ್ಲ; ಆದರೂ ಅವಳು ಭವಿಷ್ಯತ್ಕಾಲದ ಬಗ್ಗೆ ಚಿಂತಾಪರಳಾಗಿ ಆಲೋಚಿಸುತ್ತಿದ್ದಳು. ನಡೆದ ದುರ್ವ್ಯಾಪಾರದ ಮೂಲಕ ತನಗುಂಟಾಗಿದ್ದ ಹೃದಯವ್ಯಥೆಯನ್ನು ತಪ್ಪಿಸಿಕೊಳ್ಳುವದು ಅವಳ ಕೈಯಲ್ಲಿತ್ತು; ಆದರೆ ಹೀಗೆ ಮಾಡುವದಕ್ಕಾಗಿ ಅವಳು ಆತ್ಮಹತ್ಯೆ ಮಾಡಿಕೊಳ್ಳುವದರಿಂದ ತಾಯಿ-ತಂದೆಗಳಿಗಾಗಲಿ ಸಹೋದರನಿಗಾಗಲಿ ಲಾಭವಿರಲಿಲ್ಲ. ತನ್ನ ನಿಷ್ಫಲವಾದ ವಿವಾಹಕ್ಕೋಸುಗ ತಲೆಯೆತ್ತಿದ ಸಾಲವೆಂಬ ಕಾಲಸರ್ಪವು ತಂದೆಯ ವರ್ತಮಾನ ಕಾಲವನ್ನೂ, ಸಹೋದರನ ಭವಿಷ್ಯತ್ಕಾಲವನ್ನೂ ಬಲವಾಗಿ ಸುತ್ತು ಹಾಕಿಕೊಂಡಿತ್ತು. ಈ ಕಠಿಣಪಾಶದಿಂದ ತಂದೆ-ತಮ್ಮಂದಿರನ್ನು ಬಿಡಿಸುವ ಬಗೆಯೆಂತು? ಇದರಲ್ಲಿ ತಾನು ಅಪರಾಧಿನಿಯಲ್ಲವೆಂದೂ, ಬೇಕಾಗಿದ್ದ ಶಕ್ತಿಯು ತನ್ನಲ್ಲಿಲ್ಲವೆಂದೂ ಚಂದ್ರಿಕೆಯು ಅರಿತಿದ್ದರೂ ಮನಸ್ಸಿನ ತಳಮಳವನ್ನೂ ವಿಚಾರ ಸರಣಿಯನ್ನೂ ತಡೆದು ನಿಲ್ಲಿಸಲಿಕ್ಕೆ ಅವಳಿಂದಾಗಲಿಲ್ಲ. ಅವಳು ಬಹಳವಾಗಿ ಯೋಚಿಸಿದಳು. ಆತ್ಮಬಲಿಯಿಂದಾದರೂ ಕಾರ್ಯವಾಗಬಹುವೇನೆಂದು ಗೇಣಿಕೆ ಹಾಕಿದಳು. ಯಾವ ಸಮರ್ಪಕ ಉತ್ತರವೂ ಅವಳಿಗೆ ದೊರೆಯಲಿಲ್ಲ. ಈ ಪ್ರಸಂಗದಲ್ಲಿ ಅವಳಿಗೆ ಪತಿಯು ಸ್ಮರಣೆಯಾಗದಿರಲಿಲ್ಲ. ನಾಥನಿಗೆ ನಡೆದ ಸಂಗತಿಯನ್ನೂ, ಸಂಕಟ ನಿವಾರಣೆಯ ಪ್ರಾರ್ಥನೆಯನ್ನೂ ಪತ್ರಮುಖದಿಂದ ಪ್ರಾರ್ಥಿಸಿಕೊಂಡರೆ ಹೇಗಾದೀತು? ಎಂದು ಒಮ್ಮೆ ಅವಳು ಆಲೋಚಿಸಿದಳು ಕೂಡಲೆ ಅವಳ ಹೃದಯದಲ್ಲಿ ಅಡಗಿದ್ದ ಕೋಪವು ಜಾಗ್ರತವಾಯಿತು. ಅವಳು ತನ್ನಲ್ಲಿಯೇ ಇಂತು ಅಂದುಕೊಂಡಳು:—"ಕೈಹಿಡಿದ ಸತಿಯನ್ನು ನಿಷ್ಕಾರಣವಾಗಿ ತ್ಯಜಿಸಿದವನನ್ನು ಬೇಡಿಕೊಳ್ಳುವದಕ್ಕಿಂತ ಆ ಸಾಹುಕಾರನನ್ನೇ ಪ್ರಾರ್ಥಿಸಿಕೊಳ್ಳುವದು ಮೇಲು! ಆ ಸಾಹುಕಾರನು ದಯಾವಂತನಾಗಬಹುದು; ಮುದ್ದತು ಕೊಡಬಹುದು."

ಕುಬೇರನು ಮುಂಜಾವಿನಲ್ಲಿ ಹೇಳಿಹೋಗಿದ್ದಂತೆ ರಾತ್ರಿಯಲ್ಲಿ ಗೋವಿಂದರಾಯನ ಬಳಿಗೆ ಬಂದಿದ್ದನು. ಪಡಸಾಲೆಯಲ್ಲಿ ಅವರಿಬ್ಬರ ಮಾತು-ಕಥೆಗಳು ನಡೆದಿದ್ದವು. ಕುಬೇರನು ಅಂದದ್ದು:—"ರಾಯರೇ, ಮೂರು ವರುಷಗಳಲ್ಲಿ ತಮ್ಮ ದೊಡ್ಡ ಸಾಲದಲ್ಲಿ ಒಂದು ಪೈಯನ್ನಾದರೂ ತೀರಿಸದಿದ್ದವರು ಇನ್ನೆರಡು ವರುಷಗಳಲ್ಲಿ ಯಾವತ್ತು ಸಾಲವನ್ನು ಮುಟ್ಟಿಸುವಿರೆಂಬದನ್ನು ನಾನು ನಂಬಲಿಯಾ? ಈ ಬಗ್ಗೆ ನೀವು ನನಗೆ ಖಾತ್ರಿಮಾಡಿಕೊಡಬಲ್ಲಿರಾ?"

ಗೋವಿಂದರಾಯನು ಮನಸ್ಸಿನಲ್ಲಿಯು ತನ್ನ ಇಂಗಿತವನ್ನು ಅರುಹುವ ನಿರಲಿಲ್ಲ. ಆದರೆ ಅವನು ಅನಿವಾರ್ಯದಿಂದ ಕೇಳಲೇಬೇಕಾಯಿತು:-"ತಂದೆ

ಯಿರಿ. ವಿಮಾಕಂಪನಿಯಲ್ಲಿ ಹಣವಿರಿಸಿದ್ದೇನೆ. ಇನ್ನೆರಡು ವರ್ಷಗಳಲ್ಲಿ ಆ ಧನವು ನನ್ನ ಕೈಸೇರುವದು.''

"ಎಷ್ಟು ರೂಪಾಯಿಗಳು?''

ಗೋವಿಂದರಾಯನು ಆಲೋಚಿಸಿ ಹೇಳಿದನು: -''ಸುಮಾರು ಐದು ಸಾವಿರ ರೂಪಾಯಿಗಳು.''

''ರಾಯರೇ, ಆ ವಿಮಾಕಂಪನಿಯ ಗೊಂದಲದಲ್ಲಿ ಬೀಳಲಿಕ್ಕೆ ನಾನೊಲ್ಲೆನು; ಯಾಕಂದರೆ, ವಿಮಾಕಂಪನಿಯ ಹಣವು ನಚ್ಚಿಗೆಯದಲ್ಲ. ಗೊತ್ತುಪಡಿಸಿದ ಕಂತವನ್ನು ತುಂಬುವದನ್ನು ಒಮ್ಮೆ ಬಿಟ್ಟರೂ ಹಿಂದಿನ ಹಣವೆಲ್ಲ ಹೋಗಿ ಬಿಡುವದು. ಮೇಲಾಗಿ ನೀವು ಕಂತಗಳನ್ನು ಸರಿಯಾಗಿ ತುಂಬಿದರೂ ಕಂಪನಿಯಿಂದ ನಿಮ್ಮ ಹಣವನ್ನು ವಸೂಲ ಮಾಡಿಕೊಳ್ಳುವದು ಜಡವಾದ ಕೆಲಸವಾಗಿರುವದು. ವಿಮಾಕಂಪನಿಯು ದಿವಾಳಿ ತೆಗೆಯುವ ಭಯವಂತೂ ಇದ್ದೇ ಇದೆ.''

ಗೋವಿಂದರಾಯನು ಭಯಕಂಪಿತನಾದನು. ಸಮೀಪದಲ್ಲಿರುವ ವಿಭವ್ಯತ್ಕಾಲದ ಸಂಕಟಗಳು ಸಿನೇಮಾದ ಚಿತ್ರಪಟಗಳಂತೆ ಅವನ ಮಾನಸನಯನದ ಎದುರಿನಲ್ಲಿ ಅಲ್ಪಾವಕಾಶದಲ್ಲಿ ಆಟವಾಡಿ ಹೋದವು. ಗೋವಿಂದರಾಯನು ಕೆಲಹೊತ್ತು ಮಾತನಾಡಲಾರದವನಾಗಿ ಕುಳಿತು, ಬಳಿಕ ವಿನಯದಿಂದ ಹೇಳಿದ್ದು:—''ಸಾಹುಕಾರರೇ, ತುಸ ದಯೆದೋರಿರಿ. ಆಫೀಸಿನಲ್ಲಿ ನಾನು ಹಣದ ಕೆಲಸವನ್ನೇ ಮಾಡುತ್ತಿರುವೆನು. ನೀವು ನನ್ನ ಮೇಲೆ ದಾವೆಯ ಮಾಡಿದರೆ ನನ್ನ ನವಕರಿ ಹೋಗಿಬಿಡುವದು! ನಾನೂ ನನ್ನ ಪರಿವಾರವೂ ಕೇವಲ ಈ ಚಾಕರಿಯಿಂದ ಪೋಷಿಸಲ್ಪಡತಕ್ಕವರು. ನೀವು ನಿರ್ದಯರಾಗಿ ನಮ್ಮ ಹೊಟ್ಟೆಯ ಮೇಲೆ ಕಾಲ ಕೊಡಬೇಡಿರಿ. ಹನುಮಂತನಾಯಿಕರು ಮೂರು ವರ್ಷ ಸಹಿಸಿಕೊಂಡಿದ್ದಾರೆ. ನೀವು ಇನ್ನೆರಡು ವರ್ಷಗಳ ಮುದ್ದತು ಕೊಟ್ಟುಬಿಡಿರಿ. ನಾನು ಹೇಗಾದರೂ ಮಾಡಿ ಸಾಲ ತೀರಿಸುವೆನು.''

ಕುಬೇರನು ತುಸ ಹೊತ್ತು ಸುಮ್ಮನೆ ಕುಳಿತು ಬಳಿಕ ವ್ಯಂಗ್ಯಸ್ವರದಿಂದ ಹೇಳತೊಡಗಿದನು:-''ರಾಯರೆ, ನಿಮಗೆ ಈ ದಾವೆಯ ಗುಟ್ಟೇ ತಿಳಿದಿಲ್ಲವೆಂದು ತೋರುತ್ತದೆ, ನಾನಾಗಿಯೇ ಈ ದಾವೆಗೆ ಪ್ರವೃತ್ತನಾದವನಲ್ಲ; ಆಗುವ ಸಂಭವವೂ ಇಲ್ಲ. ವಿಚಾರಿಸಿ ನೋಡಿರಿ! ಮನೆಯೊಳಗಿನ ದುಡ್ಡು ಒಯ್ದು ಹನುಮಂತನಾಯಿಕರಲ್ಲಿ ಸುರುವಿ, ಈ ಕಾಗದದ ನೋಟು ಕೊಳ್ಳಲಿಕ್ಕೆ ನಾನೇನು ಉನ್ಮತ್ತನೇ? ನನಗೇನು ಬೇರೆ ಹೋರೆಗಳಿರಲಿಲ್ಲವೇ? ಹನುಮಂತನಾಯಿಕರು

ನಿಮ್ಮ ಗೆಳೆಯರು. ಮಿತ್ರನ ಮೇಲೆ ದಾವೆ ಮಾಡಿದರೆ ಜನರು ಮನಬಂದಂತೆ ಮಾತನಾಡಿಕೊಳ್ಳಬಹುದೆಂದೂ, ಈ ಅಪವಾದದಿಂದ ದೂರಿರುವದು ಒಳಿತೆಂದೂ ಭಾವಿಸಿ, ಅವರು ನನ್ನನ್ನು ಮುಂದೆ ಮಾಡಿ ಈ ಆಟವನ್ನು ಹೂಡಿದ್ದಾರೆ. ನೀವು ನನಗೆ ಹೇಳಿಕೊಳ್ಳುವುದರಿಂದ ಉಪಯೋಗವಿಲ್ಲ. ನೀವು ಈ ವಿಪತ್ತಿನಿಂದ ಪಾರಾಗಬೇಕಾದರೆ, ಯಾವತ್ತು ಹಣವನ್ನು ಪೇಡ ಮಾಡಲೇ ಬೇಕು. ಬೇರೆ ಮಾರ್ಗವೇ ಇಲ್ಲ.''

''ದುಡ್ಡು ನನ್ನ ಬಳಿಯಲ್ಲಿದ್ದರೆ, ನಾನು ನಿಮಗೆ ಈ ಪರಿಯಾಗಿ ಹೇಳಿಕೊಳ್ಳುತ್ತಿದ್ದೆನೇ? ಇಂದೇ ಹಣವನ್ನು ಸಲ್ಲಿಸಿ ಬಿಡುತ್ತಿದ್ದೆನು.''

ಈ ಸಮಯದಲ್ಲಿ ಶಾಮನು ಬಂದು, ಕುಬೇರನನ್ನು ನೋಡದವನಂತೆ ನಟಿಸಿ, ಗೋವಿಂದರಾಯನಿಗೆ ನಮಸ್ಕಾರ ಮಾಡಿ, ಕುಶಲ ಪ್ರಶ್ನೆ ಮಾಡಿದನು. ಗೋವಿಂದರಾಯನು ಶಾಮನ ಎದುರಿನಲ್ಲಿ ತನ್ನ ಸಾಲದ ವಾದ-ವಿವಾದವನ್ನು ಮಾಡುವ ಮನಸ್ಸಿಲ್ಲದವನಾಗಿ, ಶಾಮನ ಪ್ರಶ್ನೆಗಳಿಗೆ ಉತ್ತರಕೊಟ್ಟು ಒಳಗೆ ಹೋಗುವಂತೆ ಸೂಚಿಸಿದನು; ಆದರೆ ಶಾಮನು ಗೋವಿಂದರಾಯನ ಇಂಗಿತದಂತೆ ಒಳಗೆ ಹೋಗದೆ ಬಳಿಯಲ್ಲಿಯ ವರ್ತಮಾನಪತ್ರವನ್ನು ತಕ್ಕೊಂಡು, ಒತ್ತಟ್ಟಿಗೆ ಕುಳಿತು ಏಕಮನಸ್ಸಿನಿಂದ ಓದತೊಡಗಿದಂತೆ ನಟಿಸಿದನು. ಕುಬೇರನು ಪುನಃ ತನ್ನ ಮಾತೆತ್ತಿದನು:—''ರಾಯರೆ, ಬಳಿಯಲ್ಲಿ ಧನವಿಲ್ಲವೆಂದು ಹೇಳಿ ಪಾರಾಗುವ ಹಂಚಿಕೆಯಲ್ಲಿರುವಿರಿ! ಈ ನಿಮ್ಮ ಆಟವು ನನ್ನ ಬಳಿಯಲ್ಲಿ ನಡೆಯದು! ನಿಮ್ಮಲ್ಲಿ ದುಡ್ಡು ಅದೆಯೋ ಇಲ್ಲವೋ ಎಂಬುದನ್ನು ಕೋರ್ಟಿನ ತೀರ್ಮಾನದ ತರುವಾಯದಲ್ಲಿ ತುರಂಗವಾರಂಟು ತೆಗೆಯಿಸಿಕೊಂಡು ಬಂದು ನಿಮಗೆ ತಿಳುಹಿ ಕೊಡುವೆನು! ಅಂದು ತಾನೇ ತಾನಾಗಿ ದುಡ್ಡು ವಸೂಲ ಆಗುವದು. ಹಾಗೆ ಅಪಮಾನಿತರಾಗಿ ಸಾಲ ತೀರಿಸುವದಕ್ಕಿಂತ ಹೇಗಾದರೂ ಮಾಡಿ ಇಂದೇ ಹಣಕೊಡುವದು ಉತ್ತಮವಲ್ಲವೆ?''

ಗೋವಿಂದರಾಯನು ಬುದ್ಧಿಪೂರ್ವಕವಾಗಿ ಉತ್ತರ ಕೊಡುವದನ್ನು ತಡೆದು ಕುಳಿತನು. ಶಾಮನು ಆ ಸ್ಥಳದಿಂದ ಎದ್ದು ಹೋಗಬೇಕೆಂಬುದು ಅವನ ಇಚ್ಛೆಯಾಗಿತ್ತು; ಆದರೆ ಶಾಮನು ತನ್ನ ವಾಚನ ಪ್ರಿಯತೆಯ ನಿದರ್ಶಕತೆಯಲ್ಲಿ ಆ ಸ್ಥಳವನ್ನು ಬಿಟ್ಟೇಳುವ ಲಕ್ಷಣವು ತೋರಲಿಲ್ಲ. ಗೋವಿಂದರಾಯನು ನಿರುಪಾಯನಾಗಿ ಅಂದದ್ದು ''ಸಾಹುಕಾರರೆ, ಹೆಚ್ಚಿಗೆ ಮಾತಾಡಿ ಉಪಯೋಗವಿಲ್ಲ. ನನ್ನ ಮಾತಿನ ಮನವರಿಕೆಗಾಗಿ ಬೇರೆ ಪ್ರಮಾಣಗಳನ್ನು ತಂದು ಕೊಡಲಾರೆನು. ಸದ್ಗೃಹಸ್ಥರ ಮಾತಿನಲ್ಲಿ ವಿಶ್ವಾಸವಿಡಲಿಕ್ಕೆ ನೀವು ಇಷ್ಟೊಂದು ಸಂಕೋಚ ತಕ್ಕೊಳ್ಳುವಿರೆಂದು ನಾನು ತಿಳಿದಿರಲಿಲ್ಲ.

ಸಂಭಾವಿತರಾದ ನೀವು ಹೀಗೆ ಮನಬಂದಂತೆ ಮಾತನಾಡುವದಕ್ಕೆ ಸ್ವಲ್ಪವೂ ಸಂಕೋಚಗೊಳ್ಳುವುದಿಲ್ಲವೆ?''

ಗೋವಿಂದರಾಯನ ಕೋಪನ ತರಿಸುವ ಈ ಮಾತುಗಳನ್ನು ಕೇಳಿ ಕುಬೇರನು ಕ್ಷಣಕಾಲ ಸುಮ್ಮನೆ ಕುಳಿತನು. ಬಳಿಕ ಮೆಲ್ಲನೆ ನಕ್ಕು ಹೇಳಿದನು:-''ನನಗೆ ಸಂಕೋಚವೇ? ಎಂದಿಗೂ ಇಲ್ಲ! ನಾಳೆ ನಿಮ್ಮ ಮೇಲೆ ದಾವೆಯು ಮಾಡಲಿಕ್ಕೆ ನನಗೆ ಸಂಕೋಚವೆನಿಸುವದಿಲ್ಲ! ನಾಡದು ನಿಮ್ಮ ಆಫೀಸಿನ ಮೇಲಧಿಕಾರಿಯ ಮುಖಾಂತರ ನಿಮಗೆ ಸಮನ್ಸು ಜಾರಿ ಮಾಡಿಸಲಿಕ್ಕೆ ನನಗೆ ಸಂಕೋಚವೆನಿಸುವದಿಲ್ಲ! ಕಡೆಯಲ್ಲಿ ಸಾಲದ ಹಣವನ್ನೂ ಕೋರ್ಟುಖರ್ಚನ್ನೂ ವಸೂಲ ಮಾಡಿಕೊಳ್ಳಲಿಕ್ಕೆ ಸಾಧ್ಯವಿರುವ ಯಾವತ್ತು ಉಪಾಯಗಳನ್ನವಲಂಬಿಸಲಿಕ್ಕೆ ನಾನು ಸಂಕೋಚಗೊಳ್ಳುವದಿಲ್ಲ! ರಾಯರೆ, ತಾವು ಸದ್ಗೃಹಸ್ಥರು! ಸಂಭಾವಿತರ ಮಾತಿನಲ್ಲಿ ವಿಶ್ವಾಸವಿಡಲಿಲ್ಲವೆಂದು ಕಟುವಚನಗಳಿಂದ ನನ್ನನ್ನು ತಿರಸ್ಕರಿಸುತ್ತಿರುವಿರಿ! ಆದರೆ ರಾಯರೆ, ಈ ನೋಟನ್ನು ನಿಮ್ಮ ಮುಂವೆ ಹಿಡಿವರ ನಿಮ್ಮ ಮೋರೆ ಹೇಗಾಗುವದು ನೋಡಿರಿ. ಇದರಲ್ಲಿ ಕೇವಲ ಬಾಯಮಾತಲ್ಲ. ಇದರಲ್ಲಿ ನೀವು ನಿಮ್ಮ ಕೈಯಿಂದ—ಸ್ವಂತ ಅಕ್ಷರಗಳಿಂದ – ಬೇಡಿದಾಗ ಹಣ ಕೊಡುವೆನೆ'ಂದು ಬರೆದು ಕೊಟ್ಟಿರುವಿರಿ. ಸಂಭಾವಿತರು ಹಣವನ್ನು ಕೇಳಿ ಕೇಳಿ ಪ್ರಾಣಾಂತ ಸಮಯವನ್ನು ತಂದುಕೊಂಡಿದ್ದಾರೆ; ಆದರೆ ಸದ್ಗೃಹಸ್ಥರಿಗೆ ಕರುಣೆ ಬರಲೊಲ್ಲದು! ಗೋವಿಂದರಾಯರೆ, ಕ್ಷಮಿಸಿರಿ. ನೀವು ಯಾರಿಗೆ ಅಸಂಭಾವಿತರೆಂದೆನ್ನುತ್ತಿರುವಿರೋ, ಅವರ ಮಾತಿನಲ್ಲಿ ವಿಶ್ವಾಸವಿಡಬಲ್ಲೆನಾದರೂ, ಸದ್ಗೃಹಸ್ಥರನ್ನು ನಂಬಲಾರೆನು!''

ಸಾಹುಕಾರನಿಗೆ ಹೇಳಿಕೊಂಡು ಅವನಲ್ಲಿ ದಯವುಂಟಾಗುವಂತೆ ಮಾಡಬೇಕೆಂಬ ಕಲ್ಪನೆಯುಂಟಾಗುತ್ತಲೆ ಚಂದ್ರಿಕೆಗೆ ಕುಬೇರನ ಮುಂಜಾವಿನ ಮಾತುಗಳ ಸ್ಮರಣೆಯಾಯಿತು. ಕುಬೇರನು ಸಾಯಂಕಾಲದಲ್ಲಿ ಬರುವೆನೆಂದೂ, ಎಲ್ಲ ಸಾಲವನ್ನು ತೀರಿಸಲೇ ಬೇಕೆಂದೂ ನಿಷ್ಠುರದಿಂದ ಹೇಳಿ ಹೋಗಿದ್ದನು. ಆ ಪ್ರಕಾರ ಅವನು ಬಂದಿರಬಹುದೆಂದೂ ಹೊರಗೆ ಈ ವಿಷಯವಾಗಿ ಮಾತುಕಥೆಗಳು ನಡೆದಿರಬಹುದೆಂದೂ ಭಾವಿಸಿ, ಚಂದ್ರಿಕೆಯು ಹಾಸುಗೆಯ ಬಿಟ್ಟೆದ್ದು ಹೊರಗೆ ಬಂದು, ಬಾಗಿಲವ ಬಳಿಯ ಮರೆಯಲ್ಲಿ ನಿಂತು, ಸಾಹುಕಾರ-ಸಾಲಿಗರಲ್ಲಿ ನಡೆದ ಮಾತುಗಳನ್ನು ಕೇಳತೊಡಗಿದಳು. ಕುಬೇರನ ಕಟುವಚನಗಳಿಂದ ಭಯವೂ ಸಂತಾಪವೂ ಉಂಟಾಯಿತು. ಇಂದಿನಿಂದ ಪ್ರಾರಂಭವಾಗಿದ್ದ ತಂದೆಯ ಮಾನಹಾನಿಗೂ ಅಪಾರ ದುಃಖಕ್ಕೂ ಏಕಮಾತ್ರ

ಕಾರಣಳಾಗಿದ್ದ ತಾನು ಇನ್ನು ತಾಯಿ-ತಂದೆಗಳಿಗೆ ಹೇಗೆ ಮೋರೆಯನ್ನು ತೋರಿಸಲಿ? ಎಂದು ಆಲೋಚಿಸಿ ಅತ್ಯಂತ ಕಳವಳಹೊಂದಿದಳು. ತಂದೆಯು ಸಾಹುಕಾರನಿಗೆ ಏನೆಂದು ಉತ್ತರ ಕೊಡುವನೆಂಬದನ್ನು ಕೇಳುವ ಕುತೂಹಲತೆಯಿಂದ ಅಲ್ಲಿಯೇ ನಿಂತುಕೊಂಡಳು.

ಆದರೆ ಗೋವಿಂದರಾಯನು ಉತ್ತರ ಕೊಡದೆ ಸುಮ್ಮನೆ ಕುಳಿತುಬಿಟ್ಟಿದ್ದನು. ಶಾಮನು ವರ್ತಮಾನಪತ್ರದಲ್ಲಿ ನಟ್ಟಿದ್ದ ನೋಟವನ್ನು ಕಿತ್ತುಕೊಂಡು ಅದನ್ನು ಕುಬೇರನ ಮೇಲೆ ಚೆಲ್ಲಿ ಅಂದದ್ದು:—“ಸಾಹುಕಾರರೇ, ಈ ವಿಷಯದಲ್ಲಿ ನಾನು ಒಂದೆರಡು ಮಾತುಗಳನ್ನು ಆಡಬೇಕೆಂದಿದ್ದೇನೆ. ನಿಮ್ಮ ಪರವಾನಿಗೆ ದೊರೆಯಬೇಕು! ಹಾಗು ನಿಮಗೆ ರುಚಿಸದಿದ್ದ ವಚನಗಳು ನನ್ನ ಬಾಯಿಯಿಂದ ಹೊರಬಿದ್ದರೆ, ಕ್ಷಮೆದೋರುವ ಆಶ್ವಾಸನವನ್ನು ಕೊಡಬೇಕು. ನಿಮ್ಮ ಸಾಲಿಗನು ನನ್ನ ಆಪ್ತನಾಗಿರದಿದ್ದರೆ, ‘ಅವ್ಯಾಪಾರೇಷು ವ್ಯಾಪಾರ’ ಮಾಡಲಿಕ್ಕೆ ನಾನೆಂದೂ ಇಚ್ಛಿಸುತ್ತಿರಲಿಲ್ಲ.”

ನಡೆದಿದ್ದ ನಾಟಕದಲ್ಲಿ ತನಗಿಂತಲೂ ಹೆಚ್ಚು ಅಭಿನಯ ಕುಶಲತೆಯನ್ನು ತೋರುತ್ತಿರುವ ಶಾಮನನ್ನು ನೋಡಿ ವೈಮನಸ್ಯ ಕುಬೇರನ ಅಧರಗಳಲ್ಲಿ ಎಳೆನಗುವು ಮಿನುಗಿತು; ಆದರೆ ನಾಟಕವಾಡುವದರಲ್ಲಿ ನುರಿತಿದ್ದ ಕುಬೇರನು ತನ್ನ ಅಸಾವಧತೆಯನ್ನು ಮುಚ್ಚಿಕೊಳ್ಳುವದಕ್ಕೋಸುಗ ಗಟ್ಟಿಯಾಗಿ ನಕ್ಕು ಅಂದದ್ದು:—“ಹೇಳೋಣವಾಗಲಿ! ಸಾಲಿಗರು ನನ್ನನ್ನು ಅಸಂಭಾವಿತನೆಂದು ಸಂಭಾವಿಸಿದ್ದಾರೆ! ಸಾಲಿಗನ ಆಪ್ತರ ಕಡೆಯಿಂದ ಉಳಿದ ಬಹುಮಾನವನ್ನು ಪಡೆದು ಮನೆಗೆ ಹೋಗುವೆನು!”

“ಲಕ್ಷ್ಮಿಯ ಕೃಪಾಕಟಾಕ್ಷದಿಂದ ಶಕ್ತಿಸಂಪನ್ನರಾದ ಸಾಹುಕಾರರಿಗೆ ಅಸಭ್ಯರೆಂದೆನ್ನುವ ಸಾಹಸವು ಯಾರಿಗೂ ಆಗದು! ಆದರೆ ಆ ಸಾಹುಕಾರರು ದುರ್ಜನರು ಕೂಡ ಹೆಸರಿಡದಂತೆ ನಡೆಯುವದು ಇಷ್ಟವಾದದ್ದು. ದೊಡ್ಡವರ ಮನಸ್ಸು ಸದಾ ದೊಡ್ಡದಾಗಿರಲೇ ಬೇಕು.” ಶಾಮನು ಅಂದನು.

ಕುಬೇರನು ತುಸ ವಿಚಾರಿಸಿ ಅಂದದ್ದು:—“ನೀವನ್ನುವದು ಯೋಗ್ಯವಾದುದು; ಆದರೆ ಸಾಲಿಗರು ಕಾಲಸ್ವರೂಪರಾದರೆ ಧನಿಕರು ಅನಿವಾರ್ಯದಿಂದ ದುಷ್ಟರಾಗಬೇಕಾಗುವದು ಇರಲಿ. ರಾಯರೇ, ಈ ಪೊಳ್ಳು ಹರಟೆಯಿಂದ ಪ್ರಯೋಜನವೇನು? ಕೆಲಸದ ಸಲುವಾಗಿ ಏನಾದರೂ ಹೇಳುವದಿದ್ದರೆ ಮಾತನಾಡಿರಿ?”

“ನಾನು ಕೇವಲ ಹರಟೆಗಾಗಿ ನಿಮ್ಮೊಡನೆ ಮಾತು ಬಳಿಸಿದವನಲ್ಲ. ಪ್ರಕೃತ ಪ್ರಸಂಗದ ಸಲುವಾಗಿ ಹೇಳುತ್ತೇನೆ, ಕೇಳಿರಿ. ಕೇವಲ ದುಡ್ಡು

ವಸೂಲು ಮಾಡಿಕೊಳ್ಳುವುದಿಷ್ಟೇ ನಿಮ್ಮ ಕೆಲಸವಾಗಿದ್ದು, ನಮ್ಮನ್ನು ಸಂಕಟ ದಲ್ಲಿ ಕೆಡಹುವ ಮನಸ್ಸು ನಿಮಗಿಲ್ಲದಿದ್ದರೆ, ನೀವು ನಮಗೆ ಕೆಲವು ದಿವಸ ಮುದ್ದತು ಕೊಡಬೇಕು; ಯಾಕಂದರೆ, ನಾವು ನಿಮಗೆ ಇಂದೇ ಹಣವನ್ನು ಸಲ್ಲಿಸಲು ಸಮರ್ಥರಾಗಿಲ್ಲ. ಕಕ್ಕಂದಿರೇ, ನಾನು ಅನ್ನುತ್ತಿರುವದು ಸರಿ ಯಾದದ್ದಷ್ಟೇ?''

ಗೋವಿಂದರಾಯನು ವಿಹ್ವಲತೆಯಿಂದ ಅಂದದ್ದು "ನಿಜವು.''

ಶಾಮನು ಕುಬೇರನನ್ನು ಕುರಿತು ಅದಂದ್ದು "ನೀವು ನಮಗೆ ಸಮಯ ವನ್ನು ಕೊಡಲೇ ಬೇಕು. ದಾವೆಯ ಪ್ರಸಂಗವನ್ನು ತಂದುಕೊಳ್ಳುವದು ನಮಗೆ ಎಷ್ಟೇ ಭಯಾನಕವಾಗಿದ್ದರೂ, ನಿಮಗೂ ಅದು ಅಪ್ರಿಯವೇ ಸರಿ.''

ಕುಬೇರನು ಗಂಭೀರ ಮುದ್ರೆಯಿಂದ ಹೇಳಿದ್ದು "ಅಪ್ರಿಯವೆಂಬುದು ನಿಶ್ಚಿತವಾದದ್ದು. ಮಲೇರಿಯಾ ರೋಗಪೀಡಿತನಾದವನಿಗೆ ಕ್ವಿನೈನ ಎಂದಿಗೂ ರುಚಿಕರವೆನಿಸದು; ಆದರೂ ಅದನ್ನು ಸೇವಿಸಲೇ ಬೇಕು. ನಾನು ನಿಮಗೆ ಕೇವಲ ಹೆದರಿಕೆಯನ್ನು ತೋರುವದಕ್ಕೋಸ್ಕರ ಹೀಗೆ ಮಾತಾಡುತ್ತಿರುವೆ ನೆಂದಲ್ಲ; ಬೇಕಾದರೆ ನೀವು ಭಿಡೆ ವಕೀಲರ ಬಳಿಗೆ ಹೋಗಿ ವಿಚಾರಿಸಿಕೊಳ್ಳಿರಿ. ಅಂದರೆ ನಿಮಗೆ ಈ ಅಪ್ರಿಯವಾದ ವ್ಯಾಪಾರವು ಎಷ್ಟು ಮುಂದರಿದಿದೆಯೆಂಬು ದರ ಮನವರಿಕೆಯಾಗುವದು. ನಾನು ಭಿಡೆ ವಕೀಲರ ಮನೆಯಿಂದಲೇ ಇಲ್ಲಿಗೆ ಬಂದಿದ್ದೇನೆ; ಹಾಗು ಈಗ ನಾನು ಮನೆಗೆ ಹೋಗದೆ ವಕೀಲರ ಬಳಿಗೇ ಹೋಗುತ್ತೇನೆ. ವಕೀಲಿ ಪತ್ರಕ್ಕೆ ಸಹಿ ಮಾಡುವದೂ ಈ ಪ್ರಾಮಿಸರೀ ನೋಟನ್ನು ಅವರ ಕೈಯಲ್ಲಿ ಕೊಡುವದೂ ಬಾಕಿ ಉಳಿದಿದೆ. ನಾನು ಇಷ್ಟು ಕೆಲಸವನ್ನು ಸಮಾಪ್ತಗೊಳಿಸಿಯೇ ಮನೆ ಸೇರುತ್ತೇನೆ. ನಾಳಿನ ಹನ್ನೊಂದು ವರೆ ಗಂಟೆಗೇನೇ ನಮ್ಮ-ನಿಮ್ಮ ವ್ಯವಹಾರವು ಕೋರ್ಟಿನ ವ್ಯಾಪಾರವಾಗಿ ನಿಲ್ಲುವದು. ರಾಯರೇ, ಇನ್ನು ಹೆಚ್ಚಿಗೆ ಹೇಳಲೇನು! ಒಂದು ದಿವಸದ ಅವಕಾಶವನ್ನು ನಾನು ನಿಮಗೆ ಕೊಡಲಾರೆನು. ನೀವು ಹೇಳತಕ್ಕದ್ದಾಯಿ ತಷ್ಟೇ? ಇನ್ನು ನನಗೆ ಅಪ್ಪಣೆಯ ಕೊಟ್ಟುಬಿಡಿರಿ; ನಾನು ಸತತೋದ್ಯೋಗಿ ಯಾಗಿರದಿದ್ದರೂ ಹೀಗೆನಿರರ್ಥಕ ವೇಳೆಗಳೆಯುವವನಲ್ಲ.''

ಶಾಮನು ಕ್ಷಣಕಾಲ ಆಲೋಚಿಸಿ ಅಂದದ್ದು:-"ಅವಕಾಶವು ನಮಗೆ ಬೇಕೇಬೇಕು; ಆದರೆ ಸಾಲಗಾರರಾದ ನಾವು ಸಾಹುಕಾರರಾದ ನಿಮ್ಮ ಮಾತನ್ನು ಕೇಳಲೇಬೇಕು. ಆದುದರಿಂದ........'' ಶಾಮನು ಕಿಸೆಯಿಂದ 'ಮನಿಬ್ಯಾಗ' ಹೊರದೆಗೆದು, ಅದರಲ್ಲಿಯ ಒಂದು ನೋಟನ್ನು ತಕ್ಕೊಂಡು ಕುಬೇರನ ಎದು ರಿಗೆ ಹಿಡಿದನು

ಕುಬೇರನು ಪ್ರಸನ್ನತೆಯನ್ನು ತೋರ್ಪಡಿಸಿ, ಆ ನೋಟು ತೆಗೆದು ಕೊಂಡು ನೋಡಿ 'ಇದೇನು? ನೂರು ರೂಪಾಯಿಗಳ ನೋಟು!' ಎಂದಂದನು.

"ಅಹುದು. ಒಂದು ಪೈ ಸಹ ಹೆಚ್ಚಿಗೆ ಕೊಡಲಾರೆವು. ನಾವು ನಮ್ಮ ಕರ್ತವ್ಯವನ್ನು ಸಾಧ್ಯವಿದ್ದಮಟ್ಟಿಗೆ ಮಾಡಿದೆವು. ಇದರ ಪ್ರತಿಫಲವಾಗಿ ನೀವು ಎಷ್ಟು ದಿವಸಗಳ ಅವಕಾಶವನ್ನು ಕೊಡುವಿರಿ?"

"ನಿಮಗೆ ಅವಕಾಶವೇತಕ್ಕೆಬೇಕು?"

"ಸಾಧ್ಯವಿರುವ ಪ್ರಯತ್ನಗಳಿಂದ ಹಣವನ್ನು ಸಂಗ್ರಹಿಸಬೇಕಾಗಿದೆ. ಇದಕ್ಕೆ ಕಾಲಾವಧಿಯು ಬೇಕು. ಒಂದು ಮುದ್ದತು ಕೊಟ್ಟು ನೋಡಿರಿ; ಅದಕ್ಕೂ ನಾವು ತಪ್ಪಿದರೆ, ನಿಮ್ಮ ಇಷ್ಟವಿರುವಂತೆ ಮಾಡಿಕೊಳ್ಳಬಹುದು."

ಕುಬೇರನು ಶಾಮುನ ಆಗ್ರಹಾತಿಶಯದಿಂದ ಹತ್ತು ದಿವಸಗಳ ಮುದ್ದತು ಕೊಟ್ಟು, ಗೋವಿಂದರಾಯನ ಕಡೆಯಿಂದ ನೋಟಿನಲ್ಲಿ ನೂರು ರೂಪಾಯಿಗಳ ಭರಪಾಯಿ ಹಾಕಿಸಿಕೊಂಡು ಮನೆಯಿಂದ ಹೊರಬಿದ್ದನು. ಚಂದ್ರಿಕೆಯು ಕುಬೇರನು ಹೋದದ್ದನ್ನು ತಿಳಿದು, ಶಬ್ದವಾಗದಂತೆ ನಡೆದು ಒಳಗೆ ಹೋದಳು.

ಗೋವಿಂದರಾಯನು ಶಾಮುನ ಕೈಹಿಡಿದು ಗದ್ಗದ ಸ್ವರದಿಂದ ಅಂದದ್ದು "ಅಪ್ಪಾ, ನಿನಗೆ ಯಾವ ಆಶೀರ್ವಾದ ಮಾಡಲೆಂಬುದು ನನಗೆ ತಿಳಿಯಲೊಲ್ಲದು! ನೀನಿಂದು ಕೇವಲ ನನ್ನ ಮರ್ಯಾದೆಯನ್ನುಳಿಸಿದೆಯಷ್ಟೇ ಅಲ್ಲ; ಈ ದರಿದ್ರ ಪರಿವಾರವನ್ನು ಮಹಾ ವಿಪತ್ತಿನಿಂದ ಪಾರು ಮಾಡಿರುವೆ!"

ಶಾಮನು ಮೆಲ್ಲನೆ ನಕ್ಕು ನುಡಿದದ್ದು:"ಕಾಕಾ, ಹೀಗೇಕೆ ಅನ್ನುತ್ತಿರುವೆ? ಸಣ್ಣ ಸಂಗತಿಗೆ ಬಹಳ ಮಹತ್ವಕೊಟ್ಟು, ನಾನು ನಾಚುವಂತೆ ಮಾಡಬೇಡ. ಆಶೀರ್ವಾದವನ್ನು ಮಾಡಬೇಕೆಂಬದೇ ನಿನ್ನ ಮನಸ್ಸಿನಲ್ಲಿದ್ದರೆ, ನನ್ನ ವಿಷಯದಲ್ಲಿ ಉಂಟಾಗಿರುವ ನಿನ್ನ ಸ್ನೇಹವು ಕ್ರಮಶಃ ಹೆಚ್ಚುತ್ತಲೇ ಹೋಗಲೆಂದು ಹರಸು. ಏನು ಮಾಡುವದಿದೆ? ಹೆಚ್ಚು ಹಣವು ನನ್ನಲ್ಲಿರಲಿಲ್ಲ. ಇದ್ದರೆ ಆ ಹಲಕಟ್ಟ ಮನುಷ್ಯನ ಕೈಯಲ್ಲಿ ಹಣಕೊಟ್ಟು ಚಂಡಿನ ಮೇಲೆ ಕೈಕೊಟ್ಟು ದಬ್ಬಿಬಿಡುತ್ತಿದ್ದೆನು. ಆಗಲಿ, ಹೊತ್ತು ಬಂದಾಗ ಕತ್ತೆಯ ಕಾಲನ್ನು ಹಿಡಿಯಬೇಕಾಗುವದು; ನಿಮ್ಮಂಥಹ ದೊಡ್ಡ ಮನುಷ್ಯರಿಗೆ ಬಾಯಿಗೆ ಬಂದಂತೆ ಬೊಗಳುವ ಆ ನಾಯಿಯೊಡನೆ ಪ್ರಸಂಗದ ಕಡೆಗೆ ಲಕ್ಷ್ಯವಿಟ್ಟು ಅನಿರ್ವಾಹದಿಂದ ಸೌಮ್ಯರೀತಿಯಲ್ಲಿ ಮಾತಾಡಬೇಕಾಯಿತು!"

"ಶಾಮು, ಆದಿರಲಿ ಬಿಡು; ಒಂದು ಮಾತಿನ ಬಗ್ಗೆ ನಾನು ಆಗಿನಿಂದಲೂ ವಿಚಾರಿಸುತ್ತಿದ್ದೇನೆ. ನೀನಾದರೋ ಬಳಿಯಲ್ಲಿಯ ಹಣವನ್ನು ಹಿಂದು

ಮುಂದಿನ ವಿಚಾರ ಮಾಡದೆ ಒಮ್ಮೆಲೆ ತೆಗೆದು ಕೊಟ್ಟುಬಿಟ್ಟೆ; ಅವು ನಿನ್ನ ಆಚಿನ ರೂಪಾಯಿಗಳು."

"ಆಚಿನ ರೂಪಾಯಿಗಳೇನೋ ಅಹುದು; ಆದರೆ ಅದಕ್ಕೂ ಹೆಚ್ಚು ಆಚಿನ ಕೆಲಸಕ್ಕೆ ವೆಚ್ಚವಾದ್ದರಿಂದ ನನಗೆ ಈ ವಿಷಯದಲ್ಲಿ ಅಸಮಾಧಾನವಿಲ್ಲ."

"ನಾನು ನಿನಗೆ ರೂಪಾಯಿಗಳನ್ನು ಕೊಡಲಿಕ್ಕೆ ತಡಮಾಡಿದರೆ........"

ಶಾಮನು ನಗೆಮೊಗದಿಂದ ಅಂದದ್ದು:—"ಕಕ್ಕಾ, ನಿನ್ನ ಬಳಿಯಲ್ಲಿ ರೂಪಾಯಿಗಳಿಲ್ಲ; ಹಾಗು ಒಂದೆರಡು ದಿವಸಗಳಲ್ಲಿ ನಿನ್ನ ಕೈಯಲ್ಲಿ ದುಡ್ಡು ಬರುವ ಸಂಭವವಿಲ್ಲ, ಎಂಬುದನ್ನು ವಿಚಾರಿಸಿಯೇ ಈಗ ರೂಪಾಯಿಗಳನ್ನು ಕೊಟ್ಟಿದ್ದೇನೆ. ಅಂದಬಳಿಕ ಅವು ತಿರುಗಿ ಎಂದು ನನ್ನ ಕೈಸೇರುವವು ಎಂಬುದರ ಭಾವನೆಯು ನನಗಿಲ್ಲ. ನೀನು ಅವುಗಳನ್ನು ಕೈಗಡವೆಂದಾಗಲಿ, ಸಾಲವೆಂದಾಗಲಿ ಬೇಡಿ ತಕ್ಕೊಂಡವನಲ್ಲ. ಅರ್ಥಾತ್ ಎಂದು ತಿರುಗಿ ಮುಟ್ಟಿಸೇನೆಂಬ ಭಾವನೆಯು ನಿನಗುಂಟಾಗಬೇಕಾಗಿಲ್ಲ. ನಾನು ನಿನ್ನ ವಿಪತ್ತು ನನ್ನದೆಂದು ತಿಳಿದು, ನಿನ್ನ ಅಪಮಾನವು ನನ್ನದೆಂದು ಭಾವಿಸಿ ಸಹಾಯ ಮಾಡಿದೆನಲ್ಲದೆ, ಪ್ರತ್ಯಾಶೆಯಿಂದ ಹಣ ಕೊಟ್ಟವನಲ್ಲ. ನೀನು ಈಗ ಶಿಷ್ಟಾಚಾರದ ಮಾತುಗಳನ್ನೆತ್ತಿ ನನ್ನನ್ನು ಸಮಾಧಾನ ಪಡಿಸತೊಡಗಿದರೆ, ನಾನು ಯಾವ ಅಧಿಕಾರದಿಂದ ಆ ಹಣವನ್ನು ಕೊಟ್ಟೆನೋ ಆ ಅಧಿಕಾರವು ನಿಜವಾಗಿಯೂ ನನಗಿರಲಿಲ್ಲವೆಂದು ನಾನು ವಿಷಾದಿಸಬೇಕಾಗುವದು."

"ಛೆ! ಶಾಮು, ಹೀಗೆನ್ನಬೇಡ. ನಿನಗಿರುವ ಸ್ನೇಹದ ಅಧಿಕಾರವು ನಮ್ಮ ಹರಿಗಿಂತ ರವಷ್ಟರಿಂದಲೂ ಕಡಿಮೆಯದಲ್ಲ. ತಿಳಿಯಿತೇ?"

ಹರಿಯು ಗೋವಿಂದರಾಯನ ಏಕಮಾತ್ರ ಪುತ್ರನು. ಏಳು ವರುಷಗಳ ವಯಸ್ಸಿನವನು.

"ಹೀಗಿದ್ದರೆ, ನನ್ನ ಹಣದ ಸಲುವಾಗಿ ಎಳ್ಳಷ್ಟು ಸಹ ಚಿಂತೆಗೊಳ್ಳಬೇಡ. ಇನ್ನು ಹತ್ತು ದಿವಸಗಳಲ್ಲಿ ಆ ಸಾಹುಕಾರನ ರೂಪಾಯಿಗಳನ್ನು ಮುಟ್ಟಿಸುವ ಎತ್ತುಗಡೆ ಮಾಡಿದರೆ ಸಾಕು."

ಗೋವಿಂದರಾಯನು ಚಿಂತಾಗ್ರಸ್ತನಾಗಿ ಹೇಳಿದ್ದು "ಎರಡನೆಯ ಕಡೆಯಲ್ಲಿ ಸಾಲಸಿಗುವಂತೆ ಸಾಧ್ಯವಿರುವಷ್ಟು ಪ್ರಯತ್ನ ಮಾಡಿ ನೋಡುವೆನು; ಆದರೆ ಶಾಮು, ಸಾಲ ಸಿಕ್ಕೀತೆಂಬ ಆಶೆ ನನಗಿಲ್ಲ; ಯಾಕಂದರೆ, ಈ ದಿವಸಗಳಲ್ಲಿ ವಿಶೇಷವಾದ ಆಸ್ತಿಯಿಲ್ಲದಿದ್ದರೆ, ದೊಡ್ಡ ರಕಮು ಸಾಲವಾಗಿ ಸಿಗುವುದು ದುರ್ಲಭ."

"ಆಗಲಿ, ಮುಂದೇನಾಗುವದೋ ನೋಡೋಣ. ಇಂದು ನಿಮಗೆ ಬಹಳ

ತ್ರಾಸವಾಗಿದೆ. ಇನ್ನು ನಿಶ್ಚಿಂತರಾಗಿ ವಿಶ್ರಾಂತಿಯ ತಕ್ಕೊಳ್ಳಿರಿ. ನಾನು ಹೋಗಿ ಬರುವೆನು.'' ಶಾಮನು ಹೊರಡುವದಕ್ಕೆ ಸಿದ್ಧನಾದನು.

"ಛೆ! ಹೋಗಬೇಡ; ಒಳಗೆ ಹೋಗಿ ಅವಳೊಡನೆ ಮಾತನಾಡು ನಡೆ. ಇಲ್ಲದಿದ್ದರೆ ಅವಳು ದುಃಖಿತಳಾಗಿ ನನ್ನ ಮೇಲೆ ಕೋಪಗೊಳ್ಳುವಳು. ಇಂದು ಊಟವು ಇಲ್ಲೇ ಆಗಲಿ.''

''ಬೇಡ. ಇಂದು ರಾತ್ರಿಯು ಬಹಳವಾಗಿದೆ. ಒಳಗೆ ಹೋದರೆ ಬೇಗ ಹೊರಡಲಿಕ್ಕಾಗುವದಿಲ್ಲ. ನಾಳೆಯಾಗಲಿ ನಾಡದ್ದಾಗಲಿ ನಾನೇ ಬಂದು ಊಟ ಮಾಡಿ ಹೋಗುವೆನು. ಈಗ ಆಗ್ರಹಮಾಡಬೇಡ."

ಗೋವಿಂದರಾಯನು ಕೇಳಲಿಲ್ಲ. ಶಾಮನನ್ನು ಕೈ ಹಿಡಿದು ಕರೆದು ಕೊಂಡು ಒಳಗೆ ನಡೆದನು ರಮಾಬಾಯಿಯು ರಾತ್ರಿಯ ಅಡಿಗೆಯಲ್ಲಿ ತೊಡಗಿದ್ದಳು. ಪತಿಯ ಕೂಗಿನಿಂದ ಹೊರಗೆ ಬಂದಳು. ಗೋವಿಂದರಾಯನು ಅವಳನ್ನು ಕುರಿತು ಅಂದದ್ದು ''ಇಂದಿನಿಂದ ಹರಿಯೊಬ್ಬನೇ ನಿನ್ನ ಮಗನಲ್ಲ. ಶಾಮನು ಹರಿಯ ಅಣ್ಣನು."

ರಮಾಬಾಯಿಯು ರಹಸ್ಯವನ್ನರಿಯದವಳಾಗಿ ಒಮ್ಮೆ ಪತಿಯ ಮುಖದ ಕಡೆಗೂ ಒಮ್ಮೆ ಶಾಮನ ಮೋರೆಯ ಕಡೆಗೂ ನೋಡಿ ಅಂದದ್ದು "ನೀವೆನ್ನುವದು ಸತ್ಯವು; ಆದರೆ ಇಂದು ಈ ಮಾತು ಆಡಲಿಕ್ಕೆ ಕಾರಣವೇನಾಯಿತೆಂಬದನ್ನು ಹೇಳಿರಿ, ನೋಡೋಣ?"

ಗೋವಿಂದರಾಯನು ಉತ್ತರ ಕೊಡುವ ಮೊದಲೇ ಶಾಮನು ಹಾಸ್ಯ ಮುಖದಿಂದ ಹೇಳಿದ್ದು ''ಕಕ್ಕಿ, ಕಾರಣವನ್ನು ಕೇಳಿಕೊಂಡು ಮಾಡುವದೇನು? ಕಕ್ಕನು ಹೇಳಿದ್ದನ್ನಷ್ಟು ಮನಸ್ಸಿನಲ್ಲಿಟ್ಟುಕೊಂಡು ಬಿಡು. ಹರಿಯ ಅಣ್ಣನಾಗುವದಕ್ಕೆ ನನ್ನ ತಕರಾರು ಏನೂ ಇಲ್ಲವೆಂದು ನಾನೂ ಕಬೂಲಿ ಜಬಾಬ ಕೊಡುತ್ತೇನೆ. ಆಯಿತಷ್ಟೆ?"

ಗೋವಿಂದರಾಯನು ನಡೆದ ಸಂಗತಿಯನ್ನು ವಿಸ್ತರಿಸಿ ಹೇಳಿದನು.

''ನೋಡಿದೆಯಾ ಕಕ್ಕಿ? ತೀರ ಸಣ್ಣ ಸಂಗತಿಯಿದು. ಕಕ್ಕನು ಇದಕ್ಕೆ ಬಹಳ ಬೆಲೆಕೊಟ್ಟು ಗೌರವದ ಮಾತಾಡಿ ನನಗೆ ಸಂಕೋಚವುಂಟಾಗುವಂತೆ ಮಾಡುತ್ತಿರುವುದು ನಿನಗಾದರೂ ಯೋಗ್ಯಕಾಣುವುದೇ?''

ಚಂದ್ರಿಕೆಯ ದುರವಸ್ಥೆಯನ್ನು ದೂರಗೊಳಿಸುವೆನೆಂದು ಹೇಳಿದಾಗಿನಿಂದ ಶಾಮನು ರಮಾಬಾಯಿಯ ಮನಃಪ್ರಸನ್ನತೆಯನ್ನು ಪಡೆದಿದ್ದನು. ಇಂದಿನ ಕೃತ್ಯದಿಂದಂತೂ ಆ ಪ್ರಸನ್ನತೆಯು ಮಿತಿಮೀರಿ ಹೆಚ್ಚಿತು. ಅವಳು ಶಾಮನನ್ನು ಯಾವ ಶಬ್ದಗಳಿಂದ ಕೊಂಡಾಡಬೇಕೆಂಬದನ್ನು ತಿಳಿಯದಾ

ದಳು. “ಅಪ್ಪಾ ಶಾಮು....” ಮುಂದೆ ಅವಳಿಂದ ಮಾತನಾಡಲಿಕ್ಕಾಗಲಿಲ್ಲ. ಕಂಠವು ಸದ್ಗದಿತವಾಯಿತು. ಕಣ್ಣುಗಳಿಂದ ಅಶ್ರುಗಳುದರತೊಡಗಿದವು.

ಶಾಮನು ತುಸ ಹೊತ್ತು ಸುಮ್ಮನೆ ನಿಂತು ಬಳಿಕ:“ನಿಮ್ಮಲ್ಲಿಯ ಯಾರೊಡನೆಯೂ ನನ್ನ ಮತ್ತೈಕ್ಯವಾಗಲಿಲ್ಲ! ನಾನಿನ್ನು ಇಲ್ಲಿ ಇರಲಾರೆನು! ಹರಿಯೊಡನೆ ಹರಟೆ ಹೊಡೆಯುವುದಕ್ಕೆ ಹೋಗುವೆನು.” ಎಂದಂದು ಹೊರಟನು.

ಹರಿಯು ಅಂತಸ್ತಿನ ಕೋಣೆಯಲ್ಲಿ ಕುಳಿತು, ಉಚ್ಚಸ್ವರದಿಂದ ಓದುತ್ತಲಿದ್ದನು.

ಹರಿಯು ತನ್ನ ಬಳಿಗೆ ಅಪರಿಚಿತನು ಬಂದುದನ್ನು ನೋಡಿ ಬೆರಗುಗೊಂಡನು. ಓದುವುದನ್ನು ನಿಲ್ಲಿಸಿ, ಶಾಮನ ಮುಖದ ಕಡೆಗೆ ಮಿಕಿಮಿಕಿ ನೋಡುತ್ತ ಕುಳಿತನು. ಶಾಮನು ಹತ್ತರ ಹೋಗಿ ಕುಳಿತು ಹರಟೆಯನ್ನು ಹಚ್ಚಿ ಅವನ ಸಂಕೋಚವನ್ನು ಹೋಗಲಾಡಿಸಿದ್ದಲ್ಲದೆ, ತಕ್ಕೊಂಡು ಬಂದಿದ್ದ ಕಲ್ಲುಸಕ್ಕರೆಯ ಹರಳುಗಳನ್ನು ಕೊಟ್ಟು ಅವನನ್ನು ಸಂತುಷ್ಟಪಡಿಸಿದನು.

ಚಂದ್ರಿಕೆಗೆ ಶಾಮನ ಬಳಿಗೆ ಹೋಗಲಿಕ್ಕಾಗಲಿ, ಅವನೊಡನೆ ಮಾತಾಡಲಿಕ್ಕಾಗಲಿ ಮನಸ್ಸಿರಲಿಲ್ಲ; ಯಾಕಂದರೆ, ಅವಳು ಅವನ ಸ್ವಭಾವವನ್ನು ಸಂಪೂರ್ಣವಾಗಿಯಲ್ಲದಿದ್ದರೂ ಅರ್ಧವಮರ್ಧವಾಗಿಯಾದರೂ ಅರಿತವಳಾಗಿದ್ದಳು; ಆದರೆ ಇಂದು ಸಾಯಂಕಾಲದಲ್ಲಿ ಶಾಮನು ತೋರಿದ ಉದಾರತೆಯನ್ನು ಕಣ್ಮುಟ್ಟ ಕಂಡ ಚಂದ್ರಿಕೆಯು ಮೊದಲು ಸಂಚಿತವಾದ ತಿರಸ್ಕಾರದ ಪಕ್ಕದಲ್ಲಿ ತುಸ ಕೃತಜ್ಞೆಯನ್ನು ಕಲೆಹಾಕಿದ್ದಳು. ಈ ಕೃತಜ್ಞತೆಯ ಪ್ರೇರಣೆಯಿಂದಲೂ ಅವ್ವನ ಆದೇಶದಿಂದಲೂ ಚಂದ್ರಿಕೆಯು ಉಪಾಹಾರದ ಸಾಮಾನುಗಳನ್ನು ತಕ್ಕೊಂಡು ಶಾಮನ ಹತ್ತರ ಹೋದಳು “ಶಾಮಣ್ಣಾ, ಅವ್ವನು ಉಪಾಹಾರವನ್ನು ಕಳುಹಿಕೊಟ್ಟಿದ್ದಾಳೆ, ತಕ್ಕೊಳ್ಳಬೇಕು” ಎಂದು ಅಂದು, ತಂದಿದ್ದ ಪದಾರ್ಥಗಳನ್ನು ಶಾಮನ ಮುಂದಿರಿಸಿದಳು. ಶಾಮನು ಚಂದ್ರಿಕೆಯ ಮುಖಭಾವವನ್ನು ದಿಟ್ಟಿಸಿ ನೋಡತೊಡಗಿದನು. ಚಂದ್ರಿಕೆಯು ಸಂಚಿತವಾಗುತ್ತಲಿರುವ ಸಂಕೋಚದಿಂದ ಮುಕ್ತಳಾಗುವದಕ್ಕೋಸ್ಕರ ಹರಿಯ ಕಡೆಗೆ ಮೋರೆದಿರುವಿ “ಸಣ್ಣರಾಯರು ಯಾಕೆ ಸುಮ್ಮನೆ ಕುಳಿತಿದ್ದಾರಾದೀತು? ಎಂದು ದಿಗಿಲುಗೊಂಡಿದ್ದೆನು. ಈಗ ಕಾರಣವು ತಿಳಿಯಿತು. ರಾಯರೇ, ಬಾಯಿಯಲ್ಲಿ ಏನೋ ತುಂಬಿಕೊಂಡಿರುತ್ತೀರಲ್ಲ?'' ಎಂದು ಕೇಳಿದಳು.

ದಟ್ಟವಾಗಿ ತುಂಬಿದ್ದ ಕಲ್ಲುಸಕ್ಕರೆಯ ಹರಳುಗಳನ್ನು ಆಸ್ವಾದಿಸುತ್ತಿದ್ದ ಹರಿಯು ಉತ್ತರ ಕೊಡಲಾರದೆ, ತನ್ನ ಕಾಯಕವನ್ನು ಏಕಪ್ರಕಾರವಾಗಿ ಸಾಗಿ

ಸಿದ್ದನು. ಉತ್ತರವನ್ನು ಶಾಮನೇ ಕೊಟ್ಟನು:—"ಚಂದ್ರಿಕೆ, ಅವನ ಬಾಯಿಯಲ್ಲಿ ಮಾತಿಗಿಂತ ಸಿಹಿಯಾದ ಕಲ್ಲುಸಕ್ಕರೆಯ ಹರಳುಗಳಿವೆ. ಅಂದಬಳಿಕ ಅವನು ಮಾತಾಡುವ ಗೊಡವೆಗೆ ಯಾಕೆ ಹೋದಾನು?"

ಚಂದ್ರಿಕೆಯು ಪ್ರತಿಮಾತು ಆಡದಿರುವದನ್ನು ನೋಡಿ, ಶಾಮನು ಉಪಾಹಾರಕ್ಕೆ ಕುಳಿತನು. ಉಪಾಹಾರದ ಸಾಮಾನುಗಳೆಂದರೆ, ಉಪ್ಪಿಟ್ಟು ಹಾಗು ಚಹಾ. "ಹರೀ, ಬಾ; ನನ್ನ ಉಪಾಹಾರದಲ್ಲಿ ಪಾಲುಗಾರನಾಗು. ನಿಮ್ಮಕ್ಕನಿಂದ ಸಿದ್ಧಮಾಡಲ್ಪಟ್ಟ ಈ ಉಪ್ಪಿಟ್ಟು ಆ ಕಲ್ಲುಸಕ್ಕರೆಗಿಂತಲೂ ರುಚಿಕರವಾಗಿದೆ." ಉಪಾಹಾರವನ್ನು ಪ್ರಾರಂಭಿಸಿದ ಶಾಮನು ಅಂದನು.

"ಅವನು ಬೇಡ; ಊಟಮಾಡಿಕೊಂಡು ಬಂದು ಓದಲಿಕ್ಕೆ ಕುಳಿತಿದ್ದಾನೆ. ರಾತ್ರಿಯ ಸಮಯ. ಅವನಿಗೆ ತಡೆಯಲಿಕ್ಕಿಲ್ಲ" ಚಂದ್ರಿಯೆಂದಳು.

ಶಾಮನು ಒಂದೆರಡು ಗುಟುಕು ಚಹ ಕುಡಿದು ಅಂದದ್ದು "ಚಹವು ಸರ್ವೋತ್ಕೃಷ್ಟವಾಗಿದೆ. ಇಂತಹ ಚಹವನ್ನು ನಾನಿದುವರೆಗೂ ಕುಡಿದಿರಲಿಲ್ಲ. ಈ ಚಹವು ನಿನ್ನ ಸುಂದರ ಹಸ್ತಗಳಿಂದಲೇ ಸಿದ್ಧವಾಗಿರಬೇಕೆಂದು ನಾನು ನಿಶ್ಚಯಿಸಿದ್ದರೆ, ತಪ್ಪಾಗಲಿಕ್ಕಿಲ್ಲವಷ್ಟೆ?"

ಹದಿನಾರು-ಹದಿನೇಳು ವರುಷಗಳ ವಯಸ್ಸಿನ ದೂರ ಸಂಬಂಧಿಕ ಯುವತಿಯೊಡನೆ ಹೀಗೆ ಪರಿಹಾಸ ಮಾಡುವದು ಸರಿಯಾದ ಸಂಗತಿಯಾಗಿರಲಿಲ್ಲ. ಇಂದು ಮುಂಜಾನೆ ಶಾಮನು ಈ ತರದ ಪರಿಹಾಸೋಕ್ತಿಗಳನ್ನಾಡಿದ್ದರೆ, ಚಂದ್ರಿಕೆಯು ಸಹಿಸಿಕೊಂಡಿರುವ ಸಂಭವವಿರಲಿಲ್ಲ; ಆದರೆ ಸಾಯಂಕಾಲದಲ್ಲಿ ಶಾಮನ ಔದಾರ್ಯದ ಕೃತ್ಯಕ್ಕೋಸುಗ ಕೃತಜ್ಞಳಾಗಿದ್ದ ಚಂದ್ರಿಕೆಯು ಸದಸದ್ವಿವೇಕಬುದ್ಧಿಯ ವಿರುದ್ಧವಾಗಿ ಅತಿಥಿಯ ಕುಚೇಷ್ಟೆಯ ಕಟುವಾಕ್ಯಗಳನ್ನು ಸಹಿಸಿಕೊಳ್ಳಲು ಸಿದ್ಧಳಾಗಿದ್ದಳು. ಉತ್ತಮವಾದ ಒಡವೆಯನ್ನು ಕೊಳ್ಳಲು ಬಹಳ ಹಣವನ್ನು ವೆಚ್ಚ ಮಾಡುವದು ಆವಶ್ಯಕವಿರುವಂತೆ, ಶಾಮನು ಮಾಡಿದ ಉಪಕಾರದ ದೊಡ್ಡ ಹೊರೆಯನ್ನು ಅಂಶತಃ ಇಳಿಸಿಕೊಳ್ಳುವದಕ್ಕೂ ಅವನು ಮಾಡಿದ ಅಪಮಾನವನ್ನು ತಾಳಿಕೊಳ್ಳುವದಕ್ಕೂ ಬಾಧ್ಯಳು, ಎಂದು ಅವಳು ಸಂಕಲ್ಪಿಸಿಕೊಂಡಿದ್ದಳು. ಈ ಅರಿವಿನ ಮೇರೆಗೆ ಅವಳು ನಕ್ಕು ಅಂದದ್ದು "ಅಣ್ಣಾ, ಹಿಂದಿನ ಯುಗದ ಜನರು ನೀಲಕಂಠನನ್ನು ಉಪಾಸ್ಯದೇವನನ್ನು ಮಾಡಿಕೊಂಡಂತೆ ಈ ಇಪ್ಪತ್ತನೇ ಶತಮಾನದ ಜನರು ಚಹವನ್ನು ಆರಾಧಿಸುತ್ತಿರುವರು. ಅಂದಬಳಿಕ ಚಹವು ಪ್ರತಿಯೊಬ್ಬನಿಗೆ ಪ್ರಿಯವಾಗಿರುವದು ಸ್ವಾಭಾವಿಕವು."

"ಅದು ಹೇಗೆ?"

"ಸಮುದ್ರಮಥನ ಕಾಲದಲ್ಲಿ ಶಿವನು ತನ್ನ ಪರಮ ಉದಾರಗುಣವನ್ನು ತೋರುವದಕ್ಕೋಸುಗ ಎಲ್ಲರಿಗೂ ಬೇಡಾದ ಕಾಲಕೂಟ ವಿಷವನ್ನು ಧರಿಸಿ, ನೀಲಕಂಠನಾದನು. ಈ ಕಾರಣಕ್ಕಾಗಿಯೇ ನೀಲಕಂಠನು ಸಕಲ ದೇವತೆಗಳಲ್ಲಿ ಶ್ರೇಷ್ಠತಮನಾಗಿ ಜಗದ್ವಂದ್ಯನಾದನು. ಹಾಗೆಯೇ ಈ ಪೇಯವು ನೀರು-ಹಾಲು-ಸಕ್ಕರೆ ಈ ಅಪಾಯ ರಹಿತವಾದ ವಸ್ತುಗಳಲ್ಲಿ ಟೀಎಲೆಯನ್ನು ಸೇರಿಸಿಕೊಂಡು, ಹಾಗು ಅದನ್ನೇ ಮುಖ್ಯವಾಗಿ ಮಾಡಿಕೊಂಡು ವಿಷಧರವಾಗಿದೆ."

"ಚಂದ್ರಿಕೆ, ನೀನೆನ್ನುವದು ನಿಜವಿದ್ದರೆ, ಹಿಂದಿನ ಹಾಗು ಈಗಿನ ಜನರಲ್ಲಿ ಭೇದವೇನೂ ಇಲ್ಲವೆಂದು ಹೇಳಬೇಕಷ್ಟೇ?"

"ಪ್ರಾಚೀನ ಅರ್ವಾಚೀನ ಜನರ ಮನೋರಚನೆಯಲ್ಲಿ ಅಂತರವಿದ್ದೇ ಇದೆ. ಆ ಜನರು ತ್ಯಾಗಕ್ಕೆ ಮಹತಿಯನ್ನು ಕೊಟ್ಟು ನೀಲಕಂಠನನ್ನು ಆರಾಧಿಸಿದರು. ಭೋಗಪ್ರಿಯರಾದ ಈ ಜನರು ಆತ್ಮನಾಶಕ್ಕೆ ಆಶಿಸಿ, ಈ ಪೇಯವನ್ನು ಪ್ರೀತಿಸಿದ್ದಾರೆ."

"ಚಂದ್ರಿಕೆ, ತ್ಯಾಗ, ಭೋಗ ಮೊದಲಾದ ಆ ಪಾರಮಾರ್ಥಿಕ ಕಟು ಶಬ್ದಗಳಲ್ಲಿ ನನಗೆ ಸರಿಯಾದ ಗತಿಯಿಲ್ಲ; ಯಾಕಂದರೆ, ಆ ಪಾರಮಾರ್ಥ ಶಾಸ್ತ್ರವು ನೀರಸನಾದುದೆಂದೂ ವ್ಯವಹಾರಕ್ಕೆ ನಿಷ್ಪ್ರಯೋಜಕವೆಂದೂ ಬಲ್ಲವರಿಂದ ಅರಿತ ನಾನು, ಆ ಶಾಸ್ತ್ರಕ್ಕೆ ಎಂದೋ ಶರಣು ಹೊಡೆದಿದ್ದೇನೆ. ಅದಿರಲಿ. ನಾನು ಮಾತಾಡುತ್ತಿರುವದು ಪಾರಮಾರ್ಥಶಾಸ್ತ್ರದ ವಾದ-ವಿವಾದಕ್ಕಾಗಿ ಅಲ್ಲ; ಚಹದ ಗುಣದೋಷವಿಮರ್ಶೆಗೂ ಅಲ್ಲ. ಚಹವು ವಿಶ್ವವ್ಯಾಪಿಯಾಗಿದ್ದರೂ ನೀನು ತಯಾರಿಸಿದ ಚಹವು ಅನುಪಮೇಯವಾದುದೆಂಬುದು ನನ್ನ ಮಾತಿನ ಸಾರವು; ಯಾಕಂದರೆ, ಉಳಿದ ಸ್ಥಳಗಲ್ಲಿ ಸಿಕ್ಕುತ್ತಿರುವ ಚಹವು ನಿನ್ನ ಈ ಚಹಪಾನದಿಂದ ಸ್ವಾರಸ್ಯವಿಹೀನವಾದುದೆಂದು ನನ್ನ ಮನವರಿಕೆಯಾಯಿತು."

"ಅದೇತರಿಂದ?"

"ಅದನ್ನು ಹೇಳಲೇ ಬೇಕೇ? ಚಹವು ವಿಷಧರವೆಂದು ನೀನಾಗಲೇ ನುಡಿದೆ. ಈ ಚಹದಲ್ಲಿ ಆ ವಿಷವಿಲ್ಲ. ಇಷ್ಟೇ ಅಲ್ಲ; ನಿನ್ನ ಹಸ್ತಸ್ಪರ್ಶದಿಂದ ಆ ವಿಷವು ಅಮೃತವಾಗಿ ಇದರಲ್ಲಿ ಬೆರೆತು ಮರ್ತ್ಯಲೋಕದ ಈ ಪೇಯವು ಸ್ವರ್ಗೀಯವಾಗಿದೆ"

ಈ ಸಾರೆ ಚಂದ್ರಿಕೆಯು ಮಾತನಾಡಲಿಲ್ಲ. ಕುಶಲನಾದ ಶಾಮನು ಅವಳ ಮುಖಭಾವವನ್ನು ನೋಡಿ, ಮನಬಿಚ್ಚಿ ಮಾತನಾಡಲಿಕ್ಕೆ ಪ್ರಾರಂಭವಾಗಿದ್ದ ಈ ಪ್ರಥಮ ದಿವಸದಲ್ಲಿ ತಾನು ಉಪಯೋಗಿಸಿದ ಔಷಧದ ಮಾತ್ರೆಯು

ಪ್ರಮಾಣ ಬಾಹಿರವಾದುದೆಂಬದನ್ನು ಮನಗಂಡನು. ಕೂಡಲೆ ಅವನು ತನ್ನ ಮಾತಿನ ಒಲವನ್ನು ಬೇರೆ ಕಡೆಗೆ ಹೊರಳಿಸುವದಕ್ಕಾಗಿ ಅಂದದ್ದು:"ತಂಗೀ, ನನ್ನ ಮಾತಿನ ಇಂಗಿತವನ್ನರಿಯದ ನೀನು ನನ್ನ ಮೇಲೆ ಕೋಪಗೊಂಡಿರುವಂತೆ ಕಾಣುತ್ತದೆ; ಆದರೆ ನಿಜರಹಸ್ಯವನ್ನರಿತೆಯಾದರೆ, ಆ ಸಿಟ್ಟು ಇಳಿದು ಹೋಗುವದಲ್ಲದೆ ನನ್ನ ವಿಷಯದಲ್ಲಿ ದಯಾಪ್ರೇರಿತಳಾಗದಿರಲಾರೆ. ನಾನಿರುವ ಮನೆಯ ಪಕ್ಕದಲ್ಲಿ ರಾಮಯ್ಯನ ಅಂಗಡಿಯಿದೆ. ನಾನು ಪ್ರತಿದಿವಸ ಅಲ್ಲಿಯೇ ಚಹಾ ತಕ್ಕೊಳ್ಳುತ್ತೇನೆ. ನೀನು ಒಂದು ದಿವಸ ಆ ಚಹವನ್ನು ಕುಡಿದೆಯಾದರೆ, ಕೂಡಲೆ ನನ್ನ ಮಾತಿನ ಸತ್ಯತೆಯನ್ನು ಕಂಡುಕೊಳ್ಳುವೆ! ಅವನು ಒಂದು ದಿವಸ ಚಹವನ್ನು ಚನ್ನಾಗಿ ಕುದಿಸಿ, ವಿಷಮಯ ಮಾಡಿರುವನು. ಮತ್ತೊಂದು ದಿವಸ ಹೊಲಸು ಸಕ್ಕರೆಯನ್ನು ಹೆಚ್ಚಾಗಿ ಜಡಿದು, ಚಹವನ್ನು ರೇವಡಿಯ ಆಣದಂತೆ ಮಾಡಿರುವನು. ಅವನು ಎಲ್ಲಿಯ ಹಾಲು ತರುತ್ತಿರುವನೋ ದೇವರೇ ಬಲ್ಲ! ಬೇಕಾದರೆ ನಿನಗೆ ಒಂದು ದಿವಸ ಮಾದರಿಗಾಗಿ ಆ ಚಹವನ್ನು ತಂದುಕೊಡುವೆನು."

ಶಾಮನ ಈ ಮಾತುಗಳಿಂದ ಚಂದ್ರಿಕೆಯ ನಾರೀ-ಹೃದಯಕ್ಕೆ ಆಘಾತವು ಬಡೆಯದಿರಲಿಲ್ಲ. ಅವಳು ಖಿನ್ನತೆಯಿಂದ ಅಂದದ್ದು:—'ಬೇಡ. ಆ ಸುಟ್ಟ ಚಹವನ್ನು ತಕ್ಕೊಂಡು ನಾನೇನು ಮಾಡಲಿ? ನಾನು ಎಂದೂ ಚಹ ಕುಡಿದವಳಲ್ಲ ಅಣ್ಣಾ, ನಿನ್ನ ಮನೆಯ ಬಳಿಯಲ್ಲಿ ಬೇರೆ ಉತ್ತಮವಾದ ಚಹಾದ ಅಂಗಡಿಯಿಲ್ಲವೇನು? ಇಲ್ಲದಿದ್ದರೆ ಮನೆಯಲ್ಲೇ ಚಹವನ್ನು ಮಾಡಿಕೊಳ್ಳಬೇಕು; ಇಲ್ಲವೆ ದೇಹಕ್ಕೆ ಅಪಾಯವನ್ನುಂಟು ಮಾಡುವ ಈ ವ್ಯಸನಕ್ಕೆ ಚಿರರಜೆಯನ್ನೇ ಕೊಟ್ಟುಬಿಡಬೇಕು."

ಚಂದ್ರಿಕೆಗೆ ತನ್ನ ವಿಷಯದಲ್ಲಿ ಅನುಕಂಪವುಂಟಾದುದನ್ನು ತಿಳಿದ ಶಾಮನು ಸಾವಧಾನತೆಯಿಂದ ಮತ್ತಷ್ಟು ಆಘಾತವನ್ನು ಕೊಟ್ಟು, ಹುಟ್ಟಿದ ಅನುಕಂಪವನ್ನು ಹೆಚ್ಚಿಸಿಕೊಳ್ಳುವದಕ್ಕೋಸುಗ ಮುಗುಳುನಗೆಯಿಂದ:— "ತಂಗೀ, ಈ ಹಾಳು ವ್ಯಸನವನ್ನು ಬಿಡಲಿಕ್ಕೆ ನನಗೆ ಸಾಧ್ಯವಿಲ್ಲದಾಗಿದೆ. ಇದು ಇಂದಿನದಲ್ಲ; ನಿನ್ನಿನದಲ್ಲ. ಬಾಲ್ಯಕಾಲದಿಂದಲೂ ನಾನು ನಿತ್ಯದಲ್ಲಿ ಚಹವನ್ನೇ ಸೇವಿಸುತ್ತ ಬಂದಿದ್ದೇನೆ. ನನ್ನ ಮನೆಯ ಹತ್ತರ ಬೇರೆ ಉತ್ತಮ ಅಂಗಡಿಗಳಿಲ್ಲ. ಮನೆಯಲ್ಲಿ ಅಡಿಗೆಯ ವರದಾಚಾರಿಯೊಬ್ಬನಿದ್ದಾನೆ. ಇವನು ಅಡಿಗೆಯ ಮಹಾಯುಧವನ್ನಿಟ್ಟುಕೊಂಡು ನನ್ನನ್ನು ಸಾಯಹೊಡೆಯಲಿಕ್ಕೇ ಸಿದ್ಧನಾಗಿದ್ದಾನೆ. ಇಂಥವನ ಕೈಯಲ್ಲಿ ಉಪಾಹಾರದ ಶಸ್ತ್ರವನ್ನು ಕೊಡಲಿಕ್ಕೆ ನನ್ನ ಮನಸ್ಸು ಒಪ್ಪದಾಗಿದೆ."

"ಅವನು ಅಡಿಗೆಯನ್ನು ಚನ್ನಾಗಿ ಮಾಡುತ್ತಿರಲಿಕ್ಕಿಲ್ಲವೆ?"

ಶಾಮನು ನಕ್ಕು ಹೇಳಿದನು "ನೀನು ಅಪ್ಪಣೆಕೊಡು. ಒಂದು ದಿನ ಅವನನ್ನು ಕರೆತಂದು ನಿಮ್ಮಲ್ಲಿ ಅಡುಗೆಗೆ ಹಚ್ಚುವೆನು. ದುಡ್ಡು ಕೊಟ್ಟು ಆಹಾರಕ್ಕೆಂದು ತಂದ ಸಾಮಾನುಗಳನ್ನು ನಿರರ್ಥಕ ನಾಶಮಾಡುವ ಹಾಗು ಉಪಕಾರಿಗಳಾದ ಪದಾರ್ಥಗಳನ್ನು ಅಪಕಾರಿಗಳನ್ನಾಗಿ ಮಾಡಿಕೊಳ್ಳುವ ಹಲವು ಹಂಚಿಕೆಗಳನ್ನು ಅವನು ನಿಮಗೆ ಕಲಿಸಿಕೊಡಬಲ್ಲನು. ಅವನ ಅಡಿಗೆಯನ್ನು ಉಂಡು ನಾನು ಇಷ್ಟು ದಿವಸಗಳ ವರೆಗಾದರೂ ಹೇಗೆ ಬದುಕಿದೆನೆಂಬುದೇ ನನಗೆ ವಿಸ್ಮಯದ ಸಂಗತಿಯಾಗಿದೆ."

ವ್ಯಥಿತಳಾದ ಚಂದ್ರಿಕೆಯು 'ಮನೆಯಲ್ಲಿ ಬೇರೆ ಯಾರೂ ಇಲ್ಲವೇನು?' ಎಂದು ಕೇಳಿದಳು.

"ತಂಗೀ, ಅದನ್ನೇನು ಹೇಳಲಿ? ಈ ನಗರದಲ್ಲಿಯ ನನ್ನ ವಾಸಸ್ಥಳದ ಮಾತಿರಲಿ, ಸ್ವಗ್ರಾಮದಲ್ಲಿಯ ಸ್ವಂತ ಮನೆಯಲ್ಲಿಯೂ ನನ್ನವರೆನ್ನುವವರು ಯಾರೂ ಇಲ್ಲ! ನನಗೆ ಹೆಸರಿಡಬೇಕಾಗಿದ್ದ ದಿವಸವೇ ನನ್ನ ಜನನಿಯ ಹನ್ನೆರಡನೆಯ ದಿವಸವಾಯಿತೆಂದು ನಾನು ಹಿಂದುಗಡೆಯಲ್ಲಿ ಕೇಳಿ ತಿಳಿದೆನು! ಇನ್ನು ಅಪ್ಪನ ಇತಿಹಾಸವನ್ನು ಹೇಳಲಿಯಾ? ಈಗ್ಗೆ ಐದು ವರ್ಷಗಳ ಹಿಂದೆ ನನಗೆ ಕನ್ಯೆಯನ್ನು ನೋಡುವದಕ್ಕೆಂದು ಯಾವದೋ ಒಂದು ಊರಿಗೆ ಹೋಗುತ್ತಿದ್ದಾಗ ಕಳ್ಳರ ಕೈಯಲ್ಲಿ ಸಿಕ್ಕು ಅಪಮೃತ್ಯುಕ್ಕೀಡಾದನು! ಅಂದಿನಿಂದ ನಾನು ಕೇವಲ ಅನಾಥನಾಗಿ ಮರುಭೂಮಿಯ ದಾರಿಕಾರನಂತೆ ಈ ಸಂಸಾರ ಯಾತ್ರೆಯಲ್ಲಿ ನೀರಸರೀತಿಯಿಂದ ಸಂಚರಿಸುತ್ತಿದ್ದೇನೆ. ಚಂದ್ರಿಕೆ, ಈ ಕಾಲಯಾಪನೆಯ ಕಠೋರ ದುಃಖವನ್ನು ನಿನ್ನ ಮುಂದೆ ಏನೆಂದು ಉಸುರಲಿ? ಆ ಅಸಹ್ಯ ಕಷ್ಟದ ಮೂಲಕವಾಗಿಯೇ ಪ್ರೇಮತೃಷೆಯಿಂದ ಚಡಪಡಿಸುತ್ತ ನಿಮ್ಮನ್ನು ಹುಡುಕಿಕೊಂಡು ಬಂದಿದ್ದೇನೆ. ಅಂತೆಯೇ ನನಗೆ ನಿಮ್ಮ ಪ್ರೀತಿಯ ವ್ಯವಹಾರವು ಅತಿಶಯ ಆನಂದವನ್ನುಂಟು ಮಾಡುತ್ತಲಿದೆ. ನೀವು ಪ್ರೀತಿಯಿಂದ ಕೊಟ್ಟ ಸಾಮಾನುಗಳು ನನಗೆ ಬಹಳ ರುಚಿಕರ ಹತ್ತುತ್ತವೆ. ಈ ಪ್ರಸಂಗದಲ್ಲಿ ನಾನು ನಿನ್ನ ಪ್ರೇಮೋಪಹಾರದ ವರ್ಣನೆ ಮಾಡಿದ್ದರಲ್ಲಿ ನನ್ನ ಅನುಚಿತವೇನು? ನೀನೇ ಹೇಳಿಕೊಡು. ನನಗಂತೂ ಏನೂ ತಿಳಿಯದಾಗಿದೆ."

ಚಂದ್ರಿಕೆಯು ಉತ್ತರ ಕೊಡತೊಡಗುವಷ್ಟರಲ್ಲಿ ರಮಾಬಾಯಿಯು ಕರಚೀಕಾಯಿಗಳಿಂದ ತುಂಬಿದ ಪಾತ್ರೆಯನ್ನು ತಕ್ಕೊಂಡು ಬಂದು, ಅದನ್ನು ಶಾಮನ ಮುಂದಿರಿಸಿ, ಚಂದ್ರಿಕೆಗೆ ಕುಡಿಯುವ ನೀರು ತರುವಂತೆ ಅಜ್ಞಾಪಿಸಿದಳು. ಶಾಮನು ಮುಂದಿನ ಪಾತ್ರೆಯನ್ನು ನೋಡಿ ಅಂದದ್ದು:—"ಅಕ್ಕೀ,

ಇದೇ ಈಗ ಚಹವನ್ನು ತಕ್ಕೊಂಡೆನಲ್ಲ, ಇನ್ನು ಇವುಗಳನ್ನು ತಿಂದು, ಮನೆಗೆ ಹೋಗಿ ಊಟವನ್ನೇನು ಮಾಡಲಿ?"

"ಶಾಮು, ಒಲ್ಲೆನೆನ್ನಬೇಡ. ನಾನು ನಿನ್ನ ಸಲುವಾಗಿ ಇವುಗಳನ್ನು ಮಾಡಿಕೊಂಡು ಬಂದಿದ್ದೇನೆ. ಇವು ಬಹು ರುಚಿಕರವಾಗಿವೆ. ಮನೆಯ ಊಟವು ದಿನಾ ಇದ್ದೇ ಇರುವದು."

ಚಂದ್ರಿಕೆಯು ನೀರು ತರಲಿಕ್ಕೆ ಹೋಗುತ್ತಿದ್ದಳು; ಆದರೆ ಶಾಮನ ಮಾತು ಕೇಳಿ ತಿರುಗಿ ಬಂದು "ಅವ್ವಾ, ಶಾಮಣ್ಣನು ಇಂದು ಇಲ್ಲಿಯೇ ಊಟ ಮಾಡುವನು. ಶಾಮಣ್ಣನ ಅಡಿಗೆಯ ಆಚಾರಿಯು ಬಹಳ ಕೆಟ್ಟವ ನಿರುವನಂತೆ. ಶಾಮಣ್ಣನು ಇಂದು ಒಂದು ದಿವಸವಾದರೂ ಆ ಕೆಟ್ಟ ಅಡಿಗೆ ಯಿಂದ ದೂರವಿರಲಿ?" ಎಂದು ಅಂದಳು.

ಶಾಮನು ನಕ್ಕು ಹೇಳಿದನು:-"ಚಂದ್ರಿಕೆ, ಇದರಿಂದ ನನಗೆ ಮತ್ತಿಷ್ಟು ದುಃಖವಲ್ಲದೆ ಸುಖವಿಲ್ಲ; ಯಾಕಂದರೆ, ಇಂದು ಕಕ್ಕಿಯ ಅಡಿಗೆಯನ್ನು ಉಂಡ ನಾನು, ನಾಳಿನ ದಿವಸ ವರದಾಚಾರಿಯ ಆ ದಿವ್ಯಪಾಕವನ್ನು ಕುತ್ತಿಗೆ ಯಿಂದ ಒಳದೂಡಲು ಅಸಮರ್ಥನಾಗಿ ಹೋಗುವೆನು.''

ಚಂದ್ರಿಕೆಯು ಪ್ರತಿಮಾತಾಡದೆ ನೀರುತರಲು ಹೋದಳು. ರಮಾ ಬಾಯಿಯು ಅಂದದ್ದು:—"ಶಾಮು, ಚಂದ್ರಿಕೆಯು ಹೇಳಿದ ಮೇರೆಗೆ ನೀನು ಇಲ್ಲಿಯೇ ಊಟ ಮಾಡು. ಅವರು ನಿನ್ನ ಸಂಗಡ ಕೆಲವು ಮಾತುಗಳನ್ನಾಡ ಬೇಕಾಗಿದೆಯಂತೆ ನಿನ್ನನ್ನು ತಮ್ಮ ಬಳಿಗೆ ಕಳುಹಿಕೊಡಲು ನನಗೆ ಹೇಳಿ ದ್ದಾರೆ. ಮಾತಾಡುತ್ತ ಕುಳಿತೆಯೆಂದರೆ ಮನೆಗೆ ಹೋಗಲಿಕ್ಕೆ ಬಹಳ ರಾತ್ರಿ ಯಾಗುವದು.''

ಚಂದ್ರಿಕೆಯು ನೀರನ್ನು ತಂದ ಬಳಿಕ ಶಾಮನು ಒಂದೆರಡು ಸಾರೆ ಒಲ್ಲೆನೆಂದು ಅಂದು, ತರುವಾಯ ರಮಾಬಾಯಿಯ ಆಗ್ರಹಕ್ಕೊಳಗಾದವ ನಂತೆ ನಟಿಸಿ, ಕರಚೀಕಾಯಿಗಳನ್ನು ತಿನ್ನಲಿಕ್ಕೆ ಪ್ರಾರಂಭಿಸಿದನು.

ಶಾಮನು ಎರಡು ಕರಚೀಕಾಯಿಗಳನ್ನು ತಿಂದು ಅಂದದ್ದು:—"ಕಕ್ಕೀ, ನಿನ್ನ ಈ ಮಗನು ರುಚಿಕರವಾದ ಪದಾರ್ಥಗಳ ಲೋಭಿಯು. ನಾನು ಬಹಳ ಕಡೆಗಳಲ್ಲಿ ಅಡ್ಡಾಡಿದ್ದೇನೆ. ಬಹು ಜನರ ಮನೆಯಲ್ಲಿ ಕರಚೀಕಾಯಿಗಳನ್ನು ತಿಂದಿದ್ದೇನೆ; ಆದರೆ ಇಂತಹ ಕರಚೀಕಾಯಿಗಳನ್ನು ನಾನಿದುವರೆಗೂ ತಿಂದಿರುವ ದಿಲ್ಲ. ಆಹಹ! ಬಹಳ ರುಚಿಯಾಗಿವೆ.''

ಈ ಪ್ರಶಂಸೆಯಿಂದ ಸಂತುಷ್ಟಳಾದ ರಮಾಬಾಯಿಯು ತುಸ ನಕ್ಕಳು ಮಾತನಾಡಲಿಲ್ಲ.

ಆಹಾರಪ್ರಿಯರಾದ ಜನರ ವಿಷಯದಲ್ಲಿ ಸಹೃದಯರಾದ ಮಾತೆಯರು ವಿಶೇಷ ಸ್ನೇಹವನ್ನೂ ಪಕ್ಷಪಾತವನ್ನೂ ತೋರುತ್ತಿರುವದನ್ನು ಸ್ತ್ರೀಸ್ವಭಾವಜ್ಞರು ಬಲ್ಲರು. ಪಾಕಪ್ರಿಯರಾದ ರಮಣಿಯರ ಮನವೊಲಿಕೆಗೆ ಅವರು ತಯಾರಿಸಿದ ಆಹಾರದ ವಿಷಯದಲ್ಲಿ ಲೋಭವನ್ನು ತೋರಿಸುವದು ಉತ್ತಮವಾದ ಸಾಧನವೆಂಬ ತತ್ವವನ್ನು ಶಾಮನು ಅರಿತವನಾಗಿದ್ದನು. ಕಾರಣ ಅವನು ಆತುರತೆಯಿಂದ ತನ್ನ ಮುಂದಿದ್ದ ಕರಚೀಕಾಯಿಗಳನ್ನು ತಿಂದು ಅಂದದ್ದು "ಕಕ್ಕಿ, ಲೋಭವು ಪಾಪದ ಮೂಲವಂತೆ; ಆದರೂ ನಾನು ಲೋಭವನ್ನು ತಡೆಯಲಾರದವನಾಗಿರುವೆನು. ಇದ್ದರೆ ಇನ್ನೆರಡು...."

"ಇರದೆ ಏನು? ತುಸ ತಡೆ. ತಕ್ಕೊಂಡು ಬರುವೆನು." ಎಂದು ಹೇಳಿ ರಮಾಬಾಯಿಯು ಜೇಗನೆ ಹೋಗಿ ಎರಡು ಕರಚೀಕಾಯಿಗಳ ಬದಲು ನಾಲ್ಕು ಕರಚೀಕಾಯಿಗಳನ್ನು ತಕ್ಕೊಂಡು ಬಂದು, ಶಾಮನ ಮುಂದಿರುವ ಪಾತ್ರೆಯಲ್ಲಿ ಇರಿಸಿದಳು.

ನಿಜವಾಗಿ ಹೇಳುವದಾದರೆ, ಶಾಮನು ಉಪ್ಪು-ಕಾರದಪದಾರ್ಥಗಳನ್ನು ಪ್ರೀತಿಸುವವನಾಗಿದ್ದನು. ಸಿಹಿ ಪದಾರ್ಥಗಳ ವಿಷಯದಲ್ಲಿ ವೈರವಿರದಿದ್ದರೂ ಅವುಗಳನ್ನು ಸೇವಿಸುವ ಆಕ್ಕರತೆಯು ಅವನಿಗಿರಲಿಲ್ಲ; ಆದರೆ ದುರ್ದೈವದ ಮೂಲಕವಾಗಿ ಶಾಮನು ಸಿಹಿ ಪದಾರ್ಥದ ಪರೀಕ್ಷೆಯಲ್ಲಿಯೇ ಉತ್ತೀರ್ಣನಾಗಬೇಕಾಗಿತ್ತು. ಅವನು ತನ್ನ ಶಕ್ತಿಯನ್ನೆಲ್ಲ ವೆಚ್ಚಮಾಡಿ ತಿಂದನು. ಇನ್ನು ಕರಚೀಕಾಯಿ ಒಳಗೆ ಹೋಗದಂತಾಗಿತ್ತು; ಆದರೂ ಅವನು ಅಂತರೀಕ ಚಡಪಡಿಕೆಯನ್ನು ಹೊರಗೆ ತೋರಗೊಡದೆ, ಮೂರು ಕರಚೀಕಾಯಿಗಳನ್ನು ತಿಂದು ನಾಲ್ಕನೆಯದನ್ನು ಹರಿಯ ಕಡೆಗೆ ಚಾಚಿ ಅಂದದ್ದು:— "ತಮ್ಮಾ, ಇದನ್ನು ನೀನು ತಿನ್ನು. ಆಶಬುರುಕನಾದ ನಾನು ಕೇವಲ ಹೊಟ್ಟೆಯ ಕಡೆಗೆ ಲಕ್ಷ್ಯವಿಟ್ಟು ನಿನ್ನನ್ನು ಮರೆತೇಬಿಟ್ಟಿದ್ದೆನು. ನನ್ನಿಂದ ದೊಡ್ಡ ಅನುಚಿತವಾಯಿತು."

"ಅವನಿಗೆ ಬೇಡ. ಇನ್ನೂ ಒಳಗೆ ಸಾಕಷ್ಟು ಇವೆ. ಅವನು ನಾಳೆ ತಿನ್ನುವನು. ಅದೊಂದನ್ನು ನೀನೇ ತಿನ್ನು" ರಮಾಬಾಯಿಯು ಅಂದಳು.

ಚಂದ್ರಿಕೆಯು ನಕ್ಕು ನುಡಿದದ್ದು:—"ಮೇಲಾಗಿ ಹರಿಯ ಬಾಯಿಯಲ್ಲಿ ಕರಚೀಕಾಯಿಗೆ ಸ್ಥಳವೇ ಇಲ್ಲ. ಬಾಯಿಯು ಕಲ್ಲುಸಕ್ಕರೆಯ ಹರಳುಗಳಿಂದ ತುಂಬಿಹೋಗಿದೆ."

ರಮಾಬಾಯಿಯು ಮಗನ ಕಡೆಗೆ ನೋಡಿ ಮಗನ ಹತ್ತಿರವಿದ್ದ ಕಲ್ಲುಸಕ್ಕರೆಯಿಂದ ತುಂಬಿದ ಸೀಸೆಯನ್ನು ಲಕ್ಷಿಸಿ ಅಂದದ್ದು:—"ಅಂತೆಯೇ

ಹರಿಯು ದೇವರ ಹಾಗೆ ಕುಳಿತಿದ್ದಾನೆ. ಇಲ್ಲವಾದರೆ ಇವನು ಇಷ್ಟು ಹೊತ್ತಿನ ವರೆಗೆ ಸುಮ್ಮನಿರತಕ್ಕವನೇ? ಶಾಮು, ಇವನು ಕಲ್ಲುಸಕ್ಕರೆಯ ರಾಕ್ಷಸನು. ಕಲ್ಲುಸಕ್ಕರೆಯೆಂದರೆ ಮೂಗು ಕೊಯಿಸಿಕೊಳ್ಳುವನು! ಇವನಿಗೆ ಇಷ್ಟೇಕೆ ಕಲ್ಲುಸಕ್ಕರೆಯನ್ನು ಕೊಟ್ಟೆ? ಇವನು ಬೆಳಗಾಗುವದರೊಳಗೆ ಸೀಸೆಯನ್ನು ಡಬ್ಬು ಹಾಕದೆ ಬಿಡನು."

ಚಂದ್ರಿಕೆಯು ನಗೆಮೊಗದಿಂದ ನುಡಿದಳು:—"ಎಂಥ ಆಶೆಬುರುಕ ನಿದ್ದಾನೆ ನೋಡಿರಿ! ಬಾಯಲ್ಲಿ ಒಮ್ಮೆಲೆ ೨೦ ಹರಳು ಹಾಕಿಕೊಂಡಿದ್ದಾನೆ."

ಹರಿಯು ಒಂದು ದವಡೆಯಲ್ಲಿಯ ಹರಳುಗಳನ್ನು ಬೇರೊಂದು ದವಡೆಗೆ ಸರಿಸಿಕೊಂಡು 'ಆ' ಎಂದು ಬಾಯಿತೆರೆದು, "ಎಲ್ಲಿ? ಇಪ್ಪತ್ತು ಹರಳುಗಳಿರುವವೇ? ಎಣಿಸಿಕೊಳ್ಳು" ಎಂದು ಅಂದನು.

ಹರಿಯ ಹಾವಭಾವವನ್ನು ನೋಡಿ ಎಲ್ಲರೂ ಘೊಳ್ಳನೆ ನಕ್ಕರು.

"ಹರಿ, ನಿಮ್ಮಕ್ಕನು ಸುಳ್ಳು ಹೇಳುತ್ತಿರುವಳು. ಬಾಯಲ್ಲಿ ಸ್ಥಳವಿದ್ದೇ ಇದೆ. ಇಗೋ, ಈ ಕರಚೀಕಾಯಿಯನ್ನು ತಿನ್ನು ನೋಡೋಣ" ಶಾಮನು ಹೀಗೆ ಅಂದನು.

"ಅವನಿಗೆ ಬೇಡ; ನೀನೇ ತಿಂದುಬಿಡು" ರಮಾಬಾಯಿಯು ಹೇಳಿದಳು.

ಹರಿಯಾದರೂ ಆಗ್ರಹವನ್ನು ತೋರಲಿಲ್ಲ. ಶಾಮನು ನಿರುಪಾಯನಾಗಿ ಸಿಕ್ಕ ಅಲ್ಪ ವಿರಾಮದ ಲಾಭ ಮಾಡಿಕೊಂಡು, ಆ ಕರಚೀಕಾಯಿಯನ್ನು ತಿಂದುಬಿಟ್ಟನು. ಬಳಿಕ ಎರಡು ವಾಟಗ ನೀರನ್ನು ಕುಡಿದು, ಬೇರೆ ಕಡೆಯಲ್ಲಿ ಹೋಗಿ ಕುಳಿತು, ಸಿಗರೇಟಿನ ಪೆಟ್ಟಿಗೆಯನ್ನು ಹೊರದೆಗೆದನು.

ಶಾಮನು ಸಿಗರೇಟನ್ನು ಹೊತ್ತಿಸಿ, ಒಮ್ಮೆ ಆಸ್ವಾದಿಸಿ ಹೊಗೆ ಬಿಟ್ಟು ಆ ಹೊಗೆಯ ಕಡೆಗೆ ದೃಷ್ಟಿಯಿಟ್ಟು ಅಂದದ್ದು:—"ಅಕ್ಕಾ, ಏನು ಮಾಡುವದಿದೆ? ಮನೆಯಿಂದ ಹೊರಡುವಾಗ ಉಪಾಹಾರ ತೆಗೆದುಕೊಂಡೇ ಬಂದಿದ್ದೆನು. ಮತ್ತೆ ನಿಮ್ಮಲ್ಲಿ ಉಪ್ಪಿಟ್ಟು-ಚಹಗಳ ಸೇವನೆಯಾಯಿತು. ಆ ಮೇಲೆ ಕರಚೀಕಾಯಿಗಳು ಕಣ್ಣಿಗೆ ಬಿದ್ದವು. ಒಂದು ವೇಳೆ ಮೊದಲೇ ನೀವು ಅವುಗಳನ್ನು ನನಗೆ ಕೊಟ್ಟಿದ್ದರೆ, ನೀನು ಮಾಡಿದ್ದ ಎಲ್ಲ ಕರಚೀಕಾಯಿಗಳನ್ನು ನಾನೊಬ್ಬನೇ ತಿಂದುಬಿಡುತ್ತಿದ್ದೆನು. ಕೇವಲ ಮೋರೆಯ ಇದಿರು ವರ್ಣನೆಯನ್ನು ಮಾಡುವದಿಲ್ಲ. ಕರಚೀಕಾಯಿಗಳು ಬಹಳ ಸರಸವಾಗಿದ್ದವು. ಈ ವಿಷಯದಲ್ಲಿ ನಾನು ನಿನಗೆ ಉತ್ತಮವಾದ ಸರ್ಟಿಫಿಕೇಟ ಕೊಡಬಲ್ಲೆನು."

———

೮

೧

ರಮಾಬಾಯಿಯು ಪ್ರಶಂಸಾಪತ್ರವನ್ನು ಪಡೆದು ಕೆಳಗಿಳಿದು ಹೋದ ಬಳಿಕ ಶಾಮನು ದೃಷ್ಟಿಸಿ ಅಂದದ್ದು "ಚಂದ್ರಿಕೆ, ಇಂದು ನೀನು ನನ್ನನ್ನು ಪೇಚಿನಲ್ಲಿ ಕೆಡವಿದೆ!"

"ಪೇಚು ಏತರದು?"

"ಉಪಾಹಾರದಿಂದ ಹೊಟ್ಟೆಯು ಸಂಪೂರ್ಣವಾಗಿ ತುಂಬಿರಲು, ಮತ್ತೆ ರಾತ್ರಿಯ ಊಟಕ್ಕೆ ಆಗ್ರಹ ಮಾಡುತ್ತಿರುವೆ."

"ಇದರಿಂದ ಮತ್ತೇನಾಯಿತು?" ಚಂದ್ರಿಕೆಯು ನಕ್ಕು ಕೇಳಿದಳು.

"ಏನೂ ಆಗಲಿಲ್ಲ. ನಿನ್ನ ಹೃದಯದ ಪರಿಚಯವು ಮಾತ್ರ ಆಯಿತು! ಚಂದ್ರಿಕೆ, ನನ್ನ ಊಟ-ಉಪಹಾರಗಳ ಸಾಮಾನ್ಯ ದುಃಖವನ್ನು ಕೇಳಿ ನಿನ್ನ ಹೃದಯವು ದ್ರವಿಸಿತು. ಇನ್ನು ನನ್ನ ಸಂಪೂರ್ಣ ದುಃಖವನ್ನು ಕೇಳಿ ಕೊಂಡೆಯಾದರೆ, ಏನು ಮಾಡುವೆಯೋ ಎಂಬುದನ್ನು ನಾನು ಕಲ್ಪಿಸಲಿಕ್ಕೂ ಅಸಮರ್ಥನಾಗಿದ್ದೇನೆ."

ಮಾತು ಸಾಮಾನ್ಯವಾದುದೇನೋ ಸರಿ; ಆದರೆ ಶಾಮನು ಈ ಮಾತನ್ನು ಸ್ವರಪರಿವರ್ತನೆಯಿಂದ ಸರಿಯಾದ ಹಾವಭಾವದೊಡನೆ ಉಚ್ಚರಿಸಿದ ಮೂಲಕ ಚಂದ್ರಿಕೆಯು ಈ ಮಾತಿಗೆ ಗೂಢವಾದ ಅರ್ಥವನ್ನು ಕಲ್ಪಿಸಿದಳು. ಯಾವ ಉತ್ತರ ಕೊಡಬೇಕೆಂಬುದನ್ನು ಕಂಡು ಹಿಡಿಯದಾದಳು. ಉತ್ತರ ಕೊಡದೆ ಸುಮ್ಮನಿರುವದೂ ಸರಿಯಲ್ಲವೆಂದು ಅವಳಿಗೆ ಅನಿಸಿತು. ಕಾರಣ ಅವಳು ತಮ್ಮನನ್ನು ಕುರಿತು: "ಹರಿ, ಮೊನ್ನೆ ನಿಮ್ಮ ಮಾಸ್ತರನಿಗೆ ಜಡ್ಡು ಆಗಿದೆಯೆಂದು ಹೇಳಿದೆಯಲ್ಲ. ಈಗ ಹೇಗಿದೆ?" ಎಂದು ಕೇಳಿದಳು.

ಕೂಡಲೆ ಚಂದ್ರಿಕೆಗೆ ತಾನು ಹೀಗೆ ಅಪ್ರಾಸಂಗಿಕ ಮಾತನಾಡಿದುದು ಯೋಗ್ಯವಲ್ಲವೆಂದು ಹೊಳೆಯಿತು. ಅವಳು ಹರಿಯ ಉತ್ತರದ ಹಾದಿಯ ನೋಡದೆ ಶಾಮನನ್ನು ಕುರಿತು ಅಂದದ್ದು "ಅಡಿಗೆಯವನು ಅಡಿಗೆಯನ್ನು ಕೆಡಿಸುವನೆಂದು ಹೇಳುತ್ತಿರುವೆ. ಈಗಿರುವ ಅಡಿಗೆಯವನನ್ನು ಬಿಟ್ಟುಬಿಡು. ಬೇರೊಬ್ಬ ಚಲೋ ಮನುಷ್ಯನನ್ನು ಹುಡುಕಿ ತಂದಿಟ್ಟುಕೋ; ಮತ್ತು ಭೋಜನ-ಉಪಾಹಾರಗಳ ಯಾವತ್ತೂ ಭಾರವನ್ನು ಅವನ ಮೇಲೆ ಹೊರಿಸು. ನಾಲ್ಕೆಂಟು ರೂಪಾಯಿಗಳನ್ನು ಹೆಚ್ಚಿಗೆ ತಕ್ಕೊಂಡರೂ ಚಿಂತೆಯಿಲ್ಲ."

ಶಾಮನು ಚಂದ್ರಿಕೆಯ ಮಾತು ಕೇಳಿ ನಕ್ಕನು. ಅವಳ ಮನಸ್ಸಿನ ನಿಜ

ಸ್ಥಿತಿಯನ್ನರಿತುಕೊಳ್ಳಲಿಕ್ಕೆ ಅವನಿಗೆ ತಡವಾಗಲಿಲ್ಲ; ತನ್ನ ಔಷಧ ಯೋಜನೆಯು ಮತ್ತು ಮೇರೆಯನ್ನು ಮೀರಿದೆಯೆಂಬುದನ್ನು ಅವನು ಕೂಡಲೆ ಕಂಡು ಹಿಡಿದನು; ಆದರೆ ಅವನು ಜಾಣ್ಮೆಯಿಂದ ತನ್ನ ಅಭಿಯೋಗದ ಶಕ್ತಿ ಹಾಗು ಇದನ್ನು ಪ್ರತಿರೋಧಿಸುವ ಚಂದ್ರಿಕೆಯ ಶಕ್ತಿ ಇವುಗಳ ಯಥಾರ್ಥ ಅಳತೆಯನ್ನು ಮಾಡಿಕೊಂಡವನಾದುದರಿಂದ, ಕುದುರೆಯನ್ನು ಹಿಂದಕ್ಕೆ ಜಗ್ಗಿಕೊಳ್ಳದೆ, ಮತ್ತಿಷ್ಟು ಮುಂದೆ ಸಾಗಿಸಿದನು. ದಕ್ಷನಾದ ಅಸ್ತ್ರಚಿಕಿತ್ಸಕನು ಗಾಯವನ್ನು ಪರೀಕ್ಷಿಸುವುದಕ್ಕೋಸುಗ ಲೋಹಶಲಾಕೆಯನ್ನು ಉಪಯೋಗಿಸುವಂತೆ ಶಾಮನು ಚಂದ್ರಿಕೆಯ ಹೊಯಿಲನ್ನು ಅರಿತುಕೊಳ್ಳುವದಕ್ಕಾಗಿ ಜಹಾಲ ಉಪಾಯವನ್ನು ಉಪಯೋಗಿಸಿದನು.

"ಕೇವಲ ಈಗಿದ್ದ ಅಡಿಗೆಯವನನ್ನು ಹೊರಗೆ ಹಾಕುವದರಿಂದ ನನ್ನ ದುಃಖ ಶಮನವಾಗುವಂತಿದ್ದರೆ, ನಾನು ಆ ಕೆಲಸವನ್ನು ಎಂದೋ ಮಾಡಿಬಿಡುತ್ತಿದ್ದೆನು! ಪ್ರಿಯ ಚಂದ್ರಿಕೆ, ನನ್ನ ದುಃಖಗಳು ಒಂದಲ್ಲ, ಎರಡಲ್ಲ! ಹಲವು ವಿಧದ ದುಃಖಗಳು ನನ್ನನ್ನು ಪ್ರಬಲರೀತಿಯಿಂದ ಪೀಡಿಸುತ್ತಿವೆ! ಸಂಸಾರ ಸಾಗರದಲ್ಲಿ ಸಹಾಯಕರಿಲ್ಲದೆ ಈಸಿ ಈಸಿ ಕೈ ಸೋತಿರುವಾಗ, ಮೀನಗಳು ಎಷ್ಟು ಗಂಟುಬಿದ್ದಿವೆಯೋ ಅರಿಯೆನು. ಮೊಸಳೆಯ ಬಾಯಿಯಲ್ಲಿ ಸಿಕ್ಕಿಕೊಂಡಿರುವುದೇನೋ ಸತ್ಯ! ಈ ಸ್ಥಿತಿಯಲ್ಲಿ ರಕ್ತಪಿಪಾಸುಗಳಿಂದ ಒಂದೆರಡು ಮೀನಗಳನ್ನು ಬಿಡಿಸಿಕೊಳ್ಳುವುದರಿಂದ ಉಪಯೋಗವೇನು?"

ತ್ರಸ್ತಳಾದ ಚಂದ್ರಿಕೆಯು ಬಾಡಿದ ಮೋರೆಯಿಂದ:-"ಅಣ್ಣಾ, ನೀನು ಮೊಸಳೆಯೆಂದು ಯಾವುದಕ್ಕೆ ಅನ್ನುತ್ತಿರುವೆ?" ಎಂದು ಕೇಳಿದಳು.

ಶಾಮನು ವಿಷಾದದ ನಗೆಯಿಂದ ನಕ್ಕು:—"ಚಂದ್ರಿಕೆ, ಯಾವ ಅಭಾವವು ನನ್ನಲ್ಲಿ ಅತಿಶಯ ತಳಮಳವನ್ನುಂಟು ಮಾಡಿ, ಕ್ರಮಶಃ ನನ್ನನ್ನು ಕೊರಗಿಸುತ್ತಿರುವುದೋ ಅದು ಮೊಸಳೆಯೆಂತಿದೆಯೆಂದು ನಾನು ಅನ್ನುತ್ತೇನೆ." ಎಂದು ಹೇಳಿದನು.

ಆ ಅಭಾವವು ಯಾವದು? ದುಃಖವೇಕೆ? ಮುಂತಾದ ಸಂಗತಿಗಳನ್ನು ವಿಚಾರಿಸಬೇಕೆಂದು ಚಂದ್ರಿಕೆಯು ಒಮ್ಮೆ ಆಲೋಚಿಸಿದಳು; ಆದರೆ ಶಾಮನು ತನ್ನ ಪ್ರಶ್ನೆಗೆ ವಿಪರೀತವಾದ ಉತ್ತರ ಕೊಡಬಹುದೆಂಬ ಭಯದಿಂದ ಅವಳು ಕೂಡಲೆ ಆ ಆಲೋಚನೆಯಿಂದ ಹಿಂದೆಗೆದಳು. ಅವಳು ಶಾಮನಿಗೆ ಉತ್ತರ ಕೊಡುವ ಸಾಹಸವಿಲ್ಲದವಳಾಗಿ, ಹತ್ತಿರಿದ್ದ ಕಲ್ಲುಸಕ್ಕರೆಯ ಸೀಸೆಯನ್ನು ಕೈಯಲ್ಲಿ ತಕ್ಕೊಂಡು ತಿರುತಿರುವಿ ನೋಡತೊಡಗಿದಳು.

ಚಂದ್ರಿಕೆಯು ಯಾವ ಉತ್ತರದ ಆಶಂಕೆಯಿಂದ ಸುಮ್ಮನಿದ್ದಳೋ,

ಆ ಉತ್ತರವನ್ನುಚ್ಚರಿಸುವದಕ್ಕೆ ಶಾಮನು ಸಿದ್ಧನಾಗಿಯೇ ಕುಳಿತಿದ್ದನು. ಅವನು ಚಂದ್ರಿಕೆಯ ಉತ್ತರದ ಹಾದಿಯು ನೋಡದೆ, ಅವಳ ಮೇಲೆ ತೀಕ್ಷ್ಣ ದೃಷ್ಟಿಯನ್ನೆಸೆದು ಮಂದಸ್ವರದಿಂದ "ಪ್ರಿಯ ಚಂದ್ರಿಕೆ, ನಾನು ಈ ನಗರ ದಲ್ಲಿ ಕಾಲಿಡದಿದ್ದ ಉಪಾಹಾರದ ಅಂಗಡಿಗಳಿಲ್ಲ. ಹೀಗಿದ್ದರೂ ನೀನು ತಯಾರಿಸಿ ಕೊಟ್ಟ ಚಹವು ನನಗೆ ಇಷ್ಟೊಂದು ರುಚಿಕರವಾಗಿ ಏಕೆ ಅನಿಸಿ ತೆಂಬುದನ್ನು ನೀನು ತರ್ಕಿಸಿರುವೆಯಾ? ಆ ರುಚಿಯು ನೀನು ಉಪಯೋಗಿ ಸಿದ ಚಹದ ಪುಡಿ, ಸಕ್ಕರೆಗಳಲ್ಲಿದ್ದಿತೆಂದು ನೀನು ಎಣಿಸಿರುವೆಯಾ? ಹೀಗೆ ನೀನು ತಿಳಿದುಕೊಂಡಿದ್ದರೆ, ನೀನು ತಪ್ಪಿರುವೆಯೆಂದು ನಾನು ನಿರ್ದಾಕ್ಷಿಣ್ಯ ದಿಂದ ಹೇಳುತ್ತೇನೆ. ಆ ರುಚಿಯು ನಿನ್ನ ಮೋರೆಯದು! ನಿನ್ನ ಮಾತಿನದು! ನಿನ್ನ ಮಂದಹಾಸದ್ದು!" ಎಂದು ಅಂದನು.

ಶಾಮನ ಮಾತಿನ ಈ ದುಸ್ಸಾಹಸವನ್ನು ತಿಳಿದು, ಚಂದ್ರಿಕೆಯು ಕೋಪಗೊಂಡದ್ದಲ್ಲದೆ ಬೆರಗೂ ಆದಳು; ಆದರೆ ಶಾಮನು ತನ್ನ ಜಾಲ ವನ್ನು ಜಾಣ್ಮೆಯಿಂದ ಹರಡಿ, ಸಾವಧಾನತೆಯಿಂದ ಮುಂದಡಿಯಿಟ್ಟಿದ್ದ ಮೂಲಕ, ಚಂದ್ರಿಕೆಯು ತಕ್ಕ ಉತ್ತರವನ್ನು ಕೊಟ್ಟು, ಶಾಮನ ಮದವನ್ನಿಳಿ ಸಲು ಸಮರ್ಥಳಾಗಲಿಲ್ಲ. ಅವಳು ಶಾಮನ ಕೈಯಿಂದ—ಅದರಲ್ಲೂ ಅವನ ರಹಸ್ಯಮಯ ದುರ್ವಚನಗಳಿಂದ ಹೇಗೆ ಪಾರಾಗಬೇಕೆಂಬುದನ್ನು ಮಾತ್ರ ಆಲೋಚಿಸತೊಡಗಿದಳು. ಚಂದ್ರಿಕೆಯ ಈ ಮನಃಸ್ಥಿತಿಯು ಶಾಮನಿಗೆ ಅಗೋಚರವಾಗಲಿಲ್ಲ. ಅವನು ಹರಿಯುವವರೆಗೆ ಹಗ್ಗವನ್ನು ಜಗ್ಗಲಾಗ ದೆಂಬದನ್ನು ಅರಿತವನಾಗಿದ್ದನು. ಕಾರಣ ಅವನು ಮಾತಿನ ಒಲವನ್ನು ಬೇರೆ ಕಡೆಗೆ ತಿರುಗಿಸುವದಕ್ಕಾಗಿ ಹರಿಯನ್ನು ನೋಡಿ:-"ಹರಿಯ ರುಚಿಯು ನನ್ನ ರುಚಿಯಿಂದ ಭಿನ್ನವಾಗಿದೆ. ಅವನು ನಗೆಯ ರುಚಿಗಿಂತ ಸಕ್ಕರೆಯ ಸವಿಯನ್ನು ಹೆಚ್ಚಾಗಿ ಪ್ರೀತಿಸುತ್ತಾನೆ. ಇವನಿಗೆ ಕಲ್ಲುಸಕ್ಕರೆಯ ಆ ಸೀಸೆ ಯನ್ನು ಕೊಟ್ಟುಬಿಡು."

ಶಾಮನೇ ಮಾತಿನ ಪ್ರಸಂಗವನ್ನು ಬದಲಿಸಿದ್ದನ್ನು ನೋಡಿ ಚಂದ್ರಿ ಕೆಯು ಶಾಂತಳಾಗಿ, ಸೀಸೆಯನ್ನು ಹರಿಯ ಮುಂದೆ ಹಿಡಿದು. ನಗೆಮುಖ ದಿಂದ "ಹರಿ, ಇಷ್ಟರಲ್ಲಿಯೇ ಎಷ್ಟು ಹರಳುಗಳನ್ನು ತಿಂದುಬಿಟ್ಟಿರುವೆಯಲ್ಲ!" ಎಂದು ಅಂದಳು.

"ಬಹಳ ತಿಂದಿರುವೆನೇ? ಸುಳ್ಳು."

"ಈ ಸೀಸೆಯನ್ನು ನೋಡು, ಅರ್ಧಕ್ಕಿಂತಲೂ ಹೆಚ್ಚು ಬರಿದಾಗಿದೆ."

ಹರಿಯು ಸೀಸೆಯನ್ನು ನೋಡಿ, ಬಳಿಕ ಅಕ್ಕನ ಮುಖದ ಕಡೆಗೆ

ದೃಷ್ಟಿಯಿಟ್ಟು "ನೀನು ಇದರಲ್ಲಿಯ ಹಣಗಳನ್ನು ತಕ್ಕೊಂಡಿರುವೆ!" ಎಂದು ಅಂದನು.

ಶಾಮನು ಗಟ್ಟಿಯಾಗಿ ನಕ್ಕನು. ಲಜ್ಜೆಯಿಂದ ಕೆಂಪಾದ ಚಂದ್ರಿಕೆಯ ಮುಖವನ್ನು ನೋಡಿ:—"ಚಂದ್ರಿಕೆ, ನೀನು ಹೆದರಬೇಡ. ನಿನ್ನ ಪರವಾಗಿ ನಾನು ಸಾಕ್ಷಿಯಾಗಿರುವೆನು; ಆದರೆ ಹರಿಯು ಆರೋಪ ಹೊರಿಸದಷ್ಟು ಪ್ರೌಢ ವಯಸ್ಸಿನವಳು ನೀನಾಗಿಲ್ಲವೆಂಬವನ್ನು ಮಾತ್ರ ಮರೆಯದಿರು."

ಚಂದ್ರಿಕೆಯು ಶಾಮನಿಗೆ ಉತ್ತರ ಕೊಡದೆ, ಹರಿಯನ್ನು ಕುರಿತು ತಿರಸ್ಕಾರಸೂಚಕ ಸ್ವರದಿಂದ "ಒಳ್ಳೇ ಹುಡುಗನಿರುವೆ! ಗಪಗಪನೆ ತಿಂದು ಸೀಸೆಯನ್ನು ಬರಿದು ಮಾಡಿ, ಅನ್ಯರ ಮೇಲೆ ಕಳವು ಹೊರಿಸುತ್ತಿರುವೆಯಾ?" ಎಂದು ಅಂದಳು.

ಶಾಮನು ನಗೆಮೊಗದಿಂದ "ಚಂದ್ರಿಕೆ, ನೀನು ಅನ್ಯಳೇ?" ಎಂದು ಕೇಳಿದನು.

ಚಂದ್ರಿಕೆಯು ನಕ್ಕು "ಅನ್ಯಳಾಗದಿದ್ದರೂ ಎರಡನೆಯವಳಷ್ಟೇ?" ಎಂದು ಅಂದಳು.

ಹೀಗೆ ಅವರ ಮಾತುಗಳು ಸಹಜ ವಿಷಯದ ಕಡೆಗೆ ಹೊರಳಿದವು. ಮತ್ತೆ ವಿಶೇಷ ಸಂಗತಿಯೇನೂ ಸಂಭವಿಸಲಿಲ್ಲ.

ಶಾಮನು ರಾತ್ರಿಯ ಊಟ ತೀರಿಸಿಕೊಂಡು ತನ್ನ ವಾಸಸ್ಥಳಕ್ಕೆ ಹೊರಟು ಹೋದನು.

---

## ೯

ಶಾಮನು ಕುಬೇರನ ಕಡೆಯಿಂದ ಕೊಡಿಸಿದ ಹತ್ತು ದಿವಸಗಳ ಮುದ್ದತಿನಲ್ಲಿಯ ಎರಡು-ಮೂರು ದಿನಗಳನ್ನು ಗೋವಿಂದರಾಯನು ನಿಶ್ಚಿಂತ ಮನಸ್ಸಿನಿಂದ ನಿಷ್ಪ್ರಯತ್ನದಲ್ಲಿ ಕಳೆದನು. ಮುಂದೆ ನಾಲ್ಕೈದು ದಿವಸಗಳನ್ನು ಸಾಲ ಬೇಡುವದಕ್ಕೋಸುಗ ಆಪ್ತರು-ಅನಾಪ್ತರು, ಗೆಳೆಯರು-ಗೆಳೆಯರಲ್ಲದವರು, ಶೆಟ್ಟಿ-ಸಾವುಕಾರರು ಇವರುಗಳ ಮನೆಗಳನ್ನು ಅಲೆದು, ಕೃತಕಾರ್ಯನಾಗದೆ ಕಳೆದನು. ಇನ್ನುಳಿದ ದಿನಗಳನ್ನು ಶಾಮನ ಮನೆಗೆ ಎಡತಾಕುವದರಲ್ಲಿ ಕ್ರಮಿಸಿದನು. ಕಳೆದ ಎರಡು-ಮೂರು ದಿವಸಗಳಿಂದ ಶಾಮನ ಪತ್ತೆಯೇ ಇರಲಿಲ್ಲ. ಗೋವಿಂದರಾಯನು ಶಾಮನ ವಾಸಸ್ಥಳಕ್ಕೆ ಹೋಗಿ ಹೋಗಿ ಬೇಸತ್ತುಹೋದನು. ಅಡಿಗೆಯವನನ್ನು ವಿಚಾರಿಸಿದರೂ ಗೋವಿಂದರಾಯ

ನಿಗೆ ಶಾಮನು ಎಲ್ಲಿ ಹೋಗಿರುವನೆಂಬದು ತಿಳಿಯಲೇ ಇಲ್ಲ. ಗೋವಿಂದರಾಯನು ಕಡೆಗೆ ಶಾಮನ ಊರಿಗೆ ಅರ್ಜಂಟ ತಾರನ್ನು ಕೊಟ್ಟನು; ಆದರೂ ಗೋವಿಂದರಾಯನಿಗೆ ಶಾಮನು ಎಲ್ಲಿರುವನೆಂಬದು ಗೊತ್ತಾಗಲಿಲ್ಲ. ನಿರಾಶನಾದ ಗೋವಿಂದರಾಯನು ನಿಟ್ಟುಸಿರು ಬಿಟ್ಟು ದೈವದ ಮೇಲೆ ಹೊರೆ ಹಾಕಿ ಪ್ರಯತ್ನವನ್ನು ಬಿಟ್ಟುಕೊಟ್ಟನು.

ಇಂದು ಕುಬೇರನು ಯಮದೂತನಂತೆ ಗೋವಿಂದರಾಯನ ಬಳಿಗೆ ಬರತಕ್ಕವನಾಗಿದ್ದನು. ಗೋವಿಂದರಾಯನು ಇನ್ನು ಕೆಲವು ತಾಸುಗಳ ಮೇಲೆ ಒದಗುವ ಪೀಡೆಯ ಕಲ್ಪನೆಯಿಂದ ಮೂರ್ಛಾಹತನಾಗಿ ಹೋಗಿದ್ದನು. ಇವನ ಮನಃಸ್ಥಿತಿಯನ್ನು ತಿಳಿದು, ಮಾತುಗಳನ್ನು ಕೇಳಿ ರಮಾಬಾಯಿಯೂ ಚಂದ್ರಿಕೆಯೂ ಆಹಾರದ ಮೇಲೆ ಮನಸ್ಸಿಲ್ಲದವರಾಗಿ ವಿಷಾದಾತಿರೇಕದಿಂದ ಕೈಕಾಲು ಕಳೆದುಕೊಂಡು ಕುಳಿತಿದ್ದರು.

ಶಾಮನು ಸ್ವಂತದ ಹಣ ವೆಚ್ಚಮಾಡಿಕೊಂಡು ಗೋವಿಂದರಾಯನಿಗೆ ಹತ್ತು ದಿವಸಗಳ ಮುದ್ದತ ಕೊಡಿಸಿದ್ದನು. ಶಾಮನ ಈ ಸಹಾಯಕ್ಕೋಸುಗ ಗೋವಿಂದರಾಯನೂ ಇವನ ಪರಿವಾರದ ಜನರೂ ಅಂದು ಶಾಮನ ವಿಷಯದಲ್ಲಿ ಪರಮ ಸಂತುಷ್ಟರಾಗಿದ್ದರು; ಆದರೆ ಇಂದು ಆ ಭಾವನೆಯುಳಿದಿರಲಿಲ್ಲ. ಶಾಮನು ತಮ್ಮನ್ನು ಪೇಚಿನಲ್ಲಿ ಕೆಡಹುವದಕ್ಕಾಗಿಯೇ ಈ ಆಟ ಹೂಡಿದನೆಂದೂ, ಈ ಸಮಯದಲ್ಲಿ ಬುದ್ಧಿಪೂರ್ವಕವಾಗಿ ಮೋರೆದಪ್ಪಿಸಿ ಪಾರಾಗಿರುವನೆಂದೂ ಎಲ್ಲರೂ ಭಾವಿಸುತ್ತಿದ್ದರು. ಶಾಮನ ವಿಷಯದಲ್ಲಿ ಉಂಟಾಗಿದ್ದ ಪ್ರೀತಿಯ ಸ್ಥಳದಲ್ಲಿ ಕೋಪವು ಒಡಮೂಡತೊಡಗಿತ್ತು!

ಚಂದ್ರಿಕೆಯ ಮನಃಸ್ಥಿತಿಯು ಎಲ್ಲರಿಗಿಂತ ತುಸ ಭಿನ್ನವಾಗಿತ್ತು. ಅಂದು ರಾತ್ರಿಯಲ್ಲಿ ಶಾಮನು ಊಟಮಾಡಿ ಹೋದಾಗಿನಿಂದ ಇಂದಿನವರೆಗೆ ಅವಳು ಹಲವು ಸಾರೆ ಶಾಮನ ವಿಚಾರವನ್ನು ಮನದಂದಿದ್ದಳು; ಹಾಗು ಇನ್ನು ಅವನು ತಮ್ಮ ಮನೆಗೆ ಬಾರದಿರುವದೇ ಒಳಿತೆಂದು ಭಾವಿಸಿಕೊಂಡಿದ್ದಳು. ಚಂದ್ರಿಕೆಯು ವಿವಾಹದ ಮೊದಲು ಶಾಮನನ್ನು ಒಂದೆರಡು ಸಾರೆ ನೋಡಿದ್ದಳು; ಆದರೆ ಆ ಸಂಗತಿಯು ಚಂದ್ರಿಕೆಯ ಸ್ಮರಣೆಯಲ್ಲಿರಲಿಲ್ಲ. ಅವಳು ಶಾಮನನ್ನು ಸಂಪೂರ್ಣವಾಗಿ ಮರೆವೇ ಬಿಟ್ಟಿದ್ದಳು. ಅಂದು ಶಾಮನು ಒಮ್ಮಿಂದೊಮ್ಮೆಲೆ ಬಂದು: "ನಿನ್ನ ಈ ಶಾಮಣ್ಣನನ್ನು ಮರೆತೆಯಾ?" ಎಂದು ಕೇಳಿದಂದಿನಿಂದ ಚಂದ್ರಿಕೆಯ ಮನಸ್ಸಿನಲ್ಲಿ ಶಾಮನ ವಿಷಯವಾಗಿ ವಿಚಾರವುಂಟಾಗುತ್ತಲೆ ಭಯವುಂಟಾಗುತ್ತಿದ್ದಿತು. ಅವನೊಡನೆ ಏಕಾಂತದಲ್ಲಿ ಮಾತನಾಡುವ ಪ್ರಸಂಗಕ್ಕಂತೂ ಅವಳು ಗದಗದನೇ ನಡುಗುತ್ತಿದ್ದಳು;

ಯಾಕಂದರೆ, ಅವನ ಮಾತುಗಳು ಅತಿಶಯ ಗೂಢವಾದವುಗಳು; ಅವನ ದೃಷ್ಟಿಯು ಬಹಳ ತೀಕ್ಷ್ಣವಾದ್ದು; ಹಾಗು ಅವನ ಸ್ವರವು ಆಗಾಗ್ಗೆ ಪರಿವರ್ತಿತವಾಗಿ, ನೀಚ ಮನೋಭಾವನೆಯನ್ನು ಸೂಚಿಸುವಂಥದು. ಈ ಸಮಯದಲ್ಲಿ ಬೇರೆ ಯಾರಾದರೂ ನೋಡಿದರೆ, ಕಠಿಣ ಪರಿಸ್ಥಿತಿಯೊದಗುವ ಸಂಭವ. ಈ ಕಾರಣಗಳ ಮೂಲಕ ಚಂದ್ರಿಕೆಯು ಇನ್ನು ಶಾಮನ ದರ್ಶನವಾಗದಿರುವದೇ ಮಂಗಲಕರವೆಂದು ಬಗೆದಿದ್ದಳು; ಆದರೆ ಚಂದ್ರಿಕೆಯ ಈ ಮನಃಸ್ಥಿತಿಯು ಇಂದು ತೀರ ವಿಪರೀತವಾಗಿತ್ತು. ಶಾಮನು ಬಾರದಿರುವದಕ್ಕೂ, ಈ ವಿಪತ್ತಿನ ಸಮಯದಲ್ಲಿ ತಮ್ಮನ್ನು ಮರೆದು ಮರೆಯಲ್ಲಿರುವದಕ್ಕೂ ಚಂದ್ರಿಕೆಯು ಶಾಮನ ವಿಷಯದಲ್ಲಿ ಇಂದು ಕೋಪಗೊಂಡಿದ್ದಳು; ಹಾಗು ಸಮಯವು ಕ್ರಮಿಸುತ್ತ ನಡೆದಂತೆ, ಈ ಕೋಪದೊಡನೆ ಅತಿ ಸೂಕ್ಷ್ಮವೂ, ತೀಕ್ಷ್ಣವೂ ಆದ ಅಭಿಮಾನವು ಅವಳಲ್ಲಿ ಅಂಕುರಿಸಿತು.

ಮನಸ್ಸಿನ ಯಾವ ಗೌಪ್ಯಸ್ಥಳದಲ್ಲಿ ವಿಕೃತಿಯು ಸಂಭವಿಸಿರಬಹುದು? ಯಾವ ಮಾನಸಿಕ ಜಾಡ್ಯದ ಮೂಲಕ ಅಭಿಮಾನದ ಅಂಕುರವು ತಲೆಯೆತ್ತಿರಬಹುದು? ಎಂಬುದನ್ನು ಚಂದ್ರಿಕೆಯು ಅರಿಯದವಳಾಗಿದ್ದಳು; ಹಾಗು ಅಂಕುರಿತವಾದ ಈ ಅಭಿಮಾನವು ಕ್ರಮಶಃ ಬೆಳೆಯಬಹುದೇನೆಂಬುದನ್ನು ಆವಳು ಕಲ್ಪಿಸಿರಲಿಲ್ಲ. ಮುಂಜಾವಿನಲ್ಲಿ ಶೀತಲ, ಸರ್ವೋತ್ಕೃಷ್ಟ ಪೇಯವಾಗಿದ್ದ ನೀರಾರಸವು ಹೊತ್ತು ಕ್ರಮಿಸಿದಂತೆ ಉಗ್ರ ಮದಿರೆಯಾಗಿ ಮಾರ್ಪಡುವದೆಂಬದನ್ನು ಆ ಬಾಲೆಯು ಹೇಗೆ ತಿಳಿಯಬೇಕು? ಅಂತೆಯೇ ಶಾಮನು ಸಾಯಂಕಾಲದ ನಾಲ್ಕು ಗಂಟೆಗೆ ಮನೆಗೆ ಬಂದಾಗ್ಗೆ ಚಂದ್ರಿಕೆಯ ವಿಕಾರಗಳಲ್ಲಿ ಅಭಿಮಾನವು ಪ್ರಬಲವಾಗಿತ್ತು. ಶಾಮನ ಕಣ್ಣಿಗೆ ಚಂದ್ರಿಕೆಯೇ ಮೊದಲು ಬಿದ್ದಳು. ಶಾಮನು: "ಕಕ್ಕಿ ಎಲ್ಲಿದ್ದಾಳೆ?" ಎಂದು ಕೇಳಿದ ಪ್ರಶ್ನೆಗೆ, ಆ ಮಾನಿನಿಯು ಮಾತನಾಡದೆ ಮೌನವಾಗಿದ್ದಳು.

ಶಾಮನು ಚಂದ್ರಿಕೆಯ ಮುಖಭಾವವನ್ನು ನೋಡುತ್ತಲೆ, ಅವಳ ಮನಃಸ್ಥಿತಿಯನ್ನು ಕಂಡುಕೊಂಡನು. ಅವನು ಮುಂದೆ ಹೋಗದೆ ನಿಂತುಕೊಂಡು: "ನನ್ನ ಮೇಲೆ ಸಿಟ್ಟಾಗಿರುವೆಯಾ?" ಎಂದು ಮೆಲ್ಲನೆ ಕೇಳಿದನು.

ಚಂದ್ರಿಕೆಯು ಬೇರೆ ಕಡೆಗೆ ಮೋರೆದಿರುವಿ:—"ಯಾಕೆ? ಸಿಟ್ಟಾಗುವದೇಕೆ?" ಎಂದು ಹೇಳಿದಳು.

ಶಾಮನು ನಗೆಮೊಗದಿಂದ:—"ಕಾರಣವನ್ನು ನಾನು ಹೇಗೆ ಹೇಳಲಿ? ನಿನ್ನದು ನಿನಗೇ ಗೊತ್ತು!" ಎಂದು ಅಂದನು.

ಬೆಳೆಯಬಹುದಾಗಿದ್ದ ಮಾತುಗಳನ್ನು ಬೇಗ ಮುಗಿಸುವದಕ್ಕೋ

ಸುಗ ಚಂದ್ರಿಕೆಯು ತಲೆಯಲ್ಲಾಡಿಸಿ:—"ಇಲ್ಲ, ಯಾವ ಕಾರಣವೂ ಇಲ್ಲ!" ಎಂದಳು.

ಚಂದ್ರಿಕೆಯ ಇಚ್ಛೆಯಂತೆ ಶಾಮನು ಮಾತ ಬೆಳೆಸುವದನ್ನು ಬಿಡಲಿಲ್ಲ. ಆವನು ನಕ್ಕು ಅಂದದ್ದು:—"ಕಾರಣವಿಲ್ಲವೆ? ನಿಷ್ಕಾರಣವಾಗಿಯೇ ಕೋಪ ಗೊಂಡಿರುವಿಯಾ? ಚಂದ್ರಿಕೆ, ಕೇಳ ಸಂತುಷ್ಟನಾದೆನು! ಈ ಪ್ರಪಂಚದಲ್ಲಿ ಕಾರಣವಿಲ್ಲದೆ ಒದಗುತ್ತಿರುವ ಸಂಗತಿಗಳ ವಿಷಯದಲ್ಲಿಯೇ ಮಾನವರ ಶ್ರದ್ಧೆಯು ಹೆಚ್ಚು! ಯಾವ ಸಂಗತಿಗಳನ್ನು ಜಮಾಖರ್ಚಿನ ವಹಿಯಲ್ಲಿ ಬರೆ ದಿಡಲಿಕ್ಕೆ ಬರುವಂತಿಲ್ಲವೋ, ಅಂತಹ ಸಂಗತಿಗಳನ್ನು ಮಾತ್ರ ನಾವು ನಮ್ಮ ಮನಸ್ಸಿನಲ್ಲಿ ಬರೆದಿಟ್ಟುಕೊಳ್ಳುವೆವು."

ಚಂದ್ರಿಕೆಯು ಶಾಮನ ಮಾತುಗಳ ನಿಜಾರ್ಥವನ್ನು ಸಂಪೂರ್ಣವಾಗಿ ಗ್ರಹಿಸಿಕೊಳ್ಳದಿದ್ದರೂ, ಅವಳ ಮುಖವು ಆರಕ್ತವಾಯಿತು. ಉತ್ತರ ಕೊಡ ಹೋಗಿ, ಶಾಮನಿಗೆ ಉಪಹಾಸ ಮಾಡುವದಕ್ಕೆ ಆಸ್ಪದವುಂಟಾಗುವ ಸಂಧಿ ಯನ್ನೊದಗಿಸಿ ಕೊಟ್ಟದ್ದಕ್ಕಾಗಿ ಅವಳು ಪಶ್ಚಾತ್ತಾಪಪಟ್ಟಳು. ಶಾಮನು ಮಾತಿಗೆ ಮಾತು ಬಳಿಸದೆ ಬಿಡನೆಂಬದನ್ನು ತಿಳಿದ ಅವಳು ಉತ್ತರ ಕೊಡುವ ಲೋಭಕ್ಕೆ ಬೀಳದೆ, ಮಾತನಾಡದೆ, ಎರಡನೆಯ ಕಡೆಗೆ ಹೋಗಿಬಿಟ್ಟಳು. ಶಾಮನು ಗೋವಿಂದರಾಯನು ಕುಳಿತುಕೊಂಡಿದ್ದ ಕೋಣೆಯನ್ನು ಹೊಕ್ಕನು.

ಗೋವಿಂದರಾಯನು ಶಾಮನನ್ನು ನೋಡಿ 'ಅರಸುವ ಬಳ್ಳಿ ಕಾಲ್ತೊಡ ಕಿದಂತೆ' ಸಂತೋಷಿತನಾದನು; ಶಾಮನು ಬಂದಿರುವನೆಂದ ಬಳಿಕ ಯಾವದೇ ರೀತಿಯಿಂದಾಗಲಿ ತನ್ನ ಸಂಕಟವನ್ನು ಪರಿಹರಿಸದೆ ಬಿಡನೆಂದು ಭಾವಿಸಿದನು.

ಅತ್ತಿತ್ತ ತುಸ ಹರಟೆಯಾದ ಬಳಿಕ ಶಾಮನು ಅಂದದ್ದು:-"ಕಕ್ಕಾ, ಇಂದು ಸಾವುಕಾರನು ತನ್ನ ಹಣದ ವಸೂಲಿಗೆ ಬರುವ ದಿವಸವಾಗಿದೆ. ಏನಾದರೂ ವ್ಯವಸ್ಥೆಯ ಮಾಡಿರುವೆಯಾ?"

ಗೋವಿಂದರಾಯನು ಚಿಂತೆಯ ಭಾವನೆಯಿಂದ ಹೇಳಿದ್ದು:-"ಇಲ್ಲ, ಯಾವ ವ್ಯವಸ್ಥೆಯನ್ನೂ ಮಾತಾಡಲಿಕ್ಕಾಗಲಿಲ್ಲ. ಶಾಮು, ಬಹಳ ಪ್ರಯತ್ನ ಮಾಡಿದೆನು; ಗೊತ್ತಿದ್ದ ಯಾವತ್ತು ಮನೆಗಳನ್ನು ಅಲೆದು ಬಂದೆನು. ಯಾರೂ ಹಣವನ್ನು ಕೊಡಲಿಲ್ಲ! ಈ ವಿಪತ್ತಿನಿಂದ ಪಾರುಮಾಡುವ ಸಹಾಯಕನು ನೀನೊಬ್ಬನು ಮಾತ್ರ ಉಳಿದಿರುವೆ! ನಾನು ನಿನ್ನ ಮನೆಗೆ ಹಲವು ಸಾರೆ ಹೋಗಿ ಬಂದೆನು. ನಿಮ್ಮ ಊರಿಗೆ ಜರೂರಿಯ ತಾರು ಮಾಡಿದೆನು; ಆದರೂ ನೀನು ಎಲ್ಲಿಗೆ ಹೋಗಿದ್ದಿಯೆಂಬದು ಗೊತ್ತಾಗಲಿಲ್ಲ. ಅಂದು ನಮ್ಮ ಮನೆ ಯಿಂದ ಹೋದವನು ಈಗ ನಮಗೆ ಮೋರೆಯನ್ನು ತೋರಿಸಿದೆ!"

"ಕಕ್ಕಾ, ನಾನು ನಿಶ್ಚಿಂತನಾಗಿರುವೆನೆಂದು ತಿಳಿದಿರುವೆಯಾ? ಇಲ್ಲಿಂದ ಹೋಗುವಾಗ್ಗೆ ನಾನು ನನ್ನ ಸೌಲ್ಕೈದು ಮಂದಿ ಗೆಳೆಯರನ್ನು ಹಣ ಕೊಡಿರೆಂದು ಕೇಳಿದೆನು; ಆದರೆ ಸದ್ಯಕ್ಕೆ ಯಾರ ಬಳಿಯಲ್ಲೂ ಹಣವಿಲ್ಲ. ಬಳಿಕ ನಾನು ಒಂದು ಜರೂರಿಯ ಕೆಲಸಕ್ಕೋಸುಗ ಬೆಂಗಳೂರಿಗೆ ಹೋಗಬೇಕಾಗಿ ಬಂತು. ಹೋದೆನು; ಆದರೆ ನಿನ್ನ ಕೆಲಸದ ಸಲುವಾಗಿ ನಾನು ಅಲ್ಲಿಯ ಕೆಲಸವನ್ನು ಅರ್ಧಕ್ಕೇನೇ ಬಿಟ್ಟು ಬಂದಿರುವೆನು. ಏನು ಮಾಡಲಿ? ಈಗ ನನ್ನಲ್ಲಿ ಹಣವಿಲ್ಲ. ನನಗೂ ದುಡ್ಡಿನ ಅಡಚಣಿಯಿದೆ. ಈ ಪ್ರಸಂಗದಲ್ಲಿ ಹೇಗೆ ಮಾಡಬೇಕು?"

ಹತಾಶನಾದ ಗೋವಿಂದರಾಯನು ಅಂದದ್ದು:-"ಶಾಮು, ನನಗಂತೂ ಏನೂ ತಿಳಿಯದಾಗಿದೆ!"

ಶಾಮನು ತುಸ ವಿಚಾರಿಸಿ ಕೇಳಿದನು:—"ಕಕ್ಕಾ, ಅಂದು ರಾತ್ರಿಯಲ್ಲಿ ವಿಮೆಯ ಹಣದ ಸಲುವಾಗಿ ಹೇಳಿದೆಯಲ್ಲ, ಆ ಹಣವು ಎಂದು ನಿನ್ನ ಕೈ ಸೇರುವದು?"

"ಅದಕ್ಕೆ ಇನ್ನೂ ಎರಡು ವರುಷಗಳು ಬೇಕು."

ಶಾಮನು ತುಸ ಹೊತ್ತು ಸುಮ್ಮನೆ ಕುಳಿತನು. ಬಳಿಕ ವ್ಯಗ್ರತೆಯಿಂದ ಕೇಳಿದ್ದು: —"ವಿಮಾಕಂಪನಿಯ ಶೇರುಗಳನ್ನು ಮಾರಿಕೊಂಡು ಹಣಕೂಡಿಸಲಿಕ್ಕೆ ಸಾಧ್ಯವಿಲ್ಲವೇನು?"

"ಈಗ ಹಾಗೆ ಮಾಡಲಿಕ್ಕೆ ಬರುವಂತಿಲ್ಲ."

ರಮಾಬಾಯಿಯು ಈ ಮೊದಲೇ ಬಂದು ಕುಳಿತಿದ್ದಳು. ಶಾಮನು ಅವಳ ವಿಷಾದಪೂರ್ಣ ಮುಖದ ಕಡೆಗೆ ನೋಡಿ ಅಂದದ್ದು:—"ಕಕ್ಕೀ, ಈ ವ್ಯಾಪಾರದಲ್ಲಿ ನೀನು ಮನಸ್ಸು ಹಾಕಿ, ನಿರರ್ಥಕ ದುಃಖವನ್ನೇಕೆ ಮಾಡಿಕೊಳ್ಳುವೆ? ನಾವು ಗಂಡಸರಿದ್ದೇವೆ; ಹೇಗಾದರೂ ಮಾಡಿ ವ್ಯಾಪಾರವನ್ನು ಬಗೆಹರಿಸಿಕೊಳ್ಳುವೆವು."

ರಮಾಬಾಯಿಯು ನಿಟ್ಟುಸಿರಬಿಟ್ಟು ಹೇಳಿದ್ದು:—"ಶಾಮು, ಏನು ಮಾಡಲಿಯಪ್ಪ! ಈ ಹತಭಾಗಿನಿಯ ಬಳಿಯಲ್ಲಿ ಸೌಭಾಗ್ಯದ ಈ ಚಿಹ್ನಗಳ ಹೊರತು ಬೇರೆ ಆಭರಣಗಳಿಲ್ಲ. ಇದ್ದರೆ ಅವುಗಳನ್ನು ನಿಮಗೆ ಕೊಟ್ಟು, ಸದ್ಯದ ನಿಮ್ಮ ಸಂಕಟದ ಕೆಲ ಭಾಗವನ್ನಾದರೂ ಹಗುರು ಮಾಡಬಹುದಾಗಿತ್ತು. ಯಾವ ದೈವಹೀನೆಯ ಸಲುವಾಗಿ ನಿಮಗೆ ಈ ದೊಡ್ಡ ಆಪದವುಂಟಾಗಿದೆಯೋ, ಅವಳ ಒಂದೆರಡು ವಸ್ತ್ರಗಳಿವೆ. ನೀವು ಅವುಗಳನ್ನು ತಕ್ಕೊಂಡು...."

ಶಾಮನು ರಮಾಬಾಯಿಯ ಮಾತು ಪೂರ್ಣಮಾಡಗೊಡದೆ:--"ಕಕ್ಕಿ, ಹಾಗೆಂದಾದರೂ ಮಾಡಲಿಕ್ಕಾದೀತೆ? ಹುಡುಗೆಯು ಪ್ರೀತಿಯ ಆಭರಣಗಳವು! ಮೇಲಾಗಿ ಅತ್ತೆಯ ಮನೆಯವರು ಅವಳನ್ನು ಕರೆಯಬಂದರೆ?"

ಪ್ರಪಂಚದ ಈ ವಿಪತ್ಕಾಲದಲ್ಲಿ ದುರ್ದೈವಿಯಾದ ಮಗಳ ಅಲಂಕಾರಗಳನ್ನು ಆಹುತಿಯಾಗಿ ಕೊಡುವ ಮನಸ್ಸು ರಮಾಬಾಯಿಗೆ ರಮಷ್ಟಾದರೂ ಇರಲಿಲ್ಲ. ಅವಳು ಶಾಮನ ಮಾತು ಕೇಳಿ ಈ ಸಂಕಟ ಸಮಯದಲ್ಲೂ ಕೆಲ ಮಟ್ಟಿಗೆ ಸಮಾಧಾನ ಹೊಂದಿದಳು

ಬಾಗಿಲದ ಹೊರಗೆ ನಿಂತು ಶಾಮನ ಮಾತು ಕೇಳಿದ ಚಂದ್ರಿಕೆಯು ಸಿಟ್ಟು ಬೆಂಕಿಯಾದಳು. "ಹುಡುಗೆಯ ಪ್ರೀತಿಯ ಆಭರಣಗಳೇ? ಶಾಮನು ನನ್ನನ್ನು ಏನೆಂದು ತಿಳಿದಿರುವನು? ತಂದೆಯ ಈ ಸಂಕಟ ಸಮಯದಲ್ಲೂ ನಾನು ಅಲಂಕಾರಗಳ ಆಶೆಯನ್ನು ಬಿಡಲಾರೆನೆಂದು ಶಾಮನು ತಿಳಿಯುತ್ತಿರುವನಲ್ಲವೆ? ಆಗಲಿ. ಮೈಮೇಲಿನ ಅಲಂಕಾರಗಳನ್ನೆಲ್ಲ ತೆಗೆದು ಶಾಮನ ಮೋರೆಯ ಮೇಲೆ ಬಿಸುಟೇ ಬಿಡುವೆನು!"

ಶಾಮನ ಮಾತುಗಳನ್ನು ಕೇಳಿ ಗೋವಿಂದರಾಯನಿಗೆ ಈ ದುಃಖದ ವೇಳೆಯಲ್ಲೂ ನಗೆ ಬಂತು. ಅವನು ಹೇಳಿದ್ದು:-"ಶಾಮು, ಹೆಂಗಸರು ವಸ್ತ ಒಡವೆಗಳನ್ನು ಪ್ರೀತಿಸುವರೆಂಬ ವಿಷಯದಲ್ಲಿ ನನ್ನ ಭಿನ್ನಾಭಿಪ್ರಾಯವಿಲ್ಲ; ಆದರೆ ನೀನು ಅನ್ನುತ್ತಿರುವಂತೆ ಚಂದ್ರಿಕೆಯನ್ನು ಅತ್ತೆಯ ಮನೆಯವರು ಕರೆದೊಯ್ಯುವರೆಂಬದನ್ನು ನಾನೆಂದೂ ಒಪ್ಪಲಾರೆನು. ಈ ಮಾತು ಆಡುವದರಲ್ಲಿ ಆಭರಣಗಳನ್ನು ಮಾರಬೇಕೆಂದು ಹೇಳುವದು ನನ್ನ ಉದ್ದೇಶವಿಲ್ಲ. ಚಂದ್ರಿಕೆಯ ಮಾವನ ಮನೆಯವರ ವಿಷಯದಲ್ಲಿ ನಿನಗಿರುವ ವಿಶ್ವಾಸವು ಭ್ರಾಮಕವೆಂದೇ ನನ್ನ ಮತವಾಗಿದೆ."

"ಕಕ್ಕಾ, ಹೀಗೆನ್ನಬೇಡ. ನನ್ನ ನಂಬಿಗೆಯು ವ್ಯರ್ಥವೆಂದಿಗೂ ಆಗದು. ದುಡ್ಡಿನ ವ್ಯವಸ್ಥೆ ಮಾಡಿ ಕುಬೇರನನ್ನು ಸಮಾಧಾನ ಪಡಿಸುವ ಕೆಲಸವು ಮುಗಿಯುವದೊಂದೇ ತಡ; ಬಳಿಕ ನಾನು ಆ ಮೂಲ ಕೆಲಸಕ್ಕೆ ತೊಡಗುವೆನು. ನಾನು ಆ ಕೆಲಸದಲ್ಲಿ ತಪ್ಪದೇ ಕೃತಕಾರ್ಯನಾಗುವೆನೆಂಬ ವಿಶ್ವಾಸವು...."

ಶಾಮನು ಮಾತಾಡುವದನ್ನು ಅರ್ಧಕ್ಕೇನೇ ನಿಲ್ಲಿಸಿ ವಿಸ್ಮಯದಿಂದ ನೋಡಿದನು. ಚಂದ್ರಿಕೆಯು ಒಳಗೆ ಬಂದು:-"ಅಪ್ಪಾ, ಶಾಮನ ಈ ಪೊಳ್ಳು ಮಾತುಗಳನ್ನು ನೀನು ಕೇಳಬೇಡ. ನನ್ನ ಯಾವತ್ತು ಅಲಂಕಾರಗಳ ವಿನಿಮಯದಿಂದ ನಿನ್ನ ದುಃಖದ ಕೆಲ ಭಾಗವಾದರೂ ಕಡಿಮೆಯಾಗುವಂತಿದ್ದರೆ,

ನಾನು ಅವುಗಳನ್ನು ಸಂತೋಷದಿಂದ ನಿನಗೆ ಕೊಡುವೆನು.'' ಎಂದೆಂದು, ಕೈಯಲ್ಲಿರುವ ಪಾಟಲಿಯನ್ನು ಬಿಚ್ಚತೊಡಗಿದಳು.

''ಮಗು, ಇದೇನು ಮಾಡುವೆ? ಅಮಾವಾಸ್ಯೆಯ ದಿವಸ ಪಾಟಲಿಗಳನ್ನು ಬಿಚ್ಚುವದುಂಟೇ?'' ರಮಾಬಾಯಿಯು ಆರ್ತಸ್ವರದಿಂದ ಕೂಗಿಕೊಂಡಳು. ಇಷ್ಟರಲ್ಲಿಯೆ ಚಂದ್ರಿಕೆಯು ಪಾಟಲಿಗಳನ್ನು ಬಿಚ್ಚಿ ಗೋವಿಂದರಾಯನ ಬಳಿಯಲ್ಲಿರಿಸಿದ್ದಳು.

ಚಂದ್ರಿಕೆಯು ಶಾಮನ ಕಡೆಗೆ ದೃಷ್ಟಿಯನ್ನು ಹೊರಳಿಸಿ ಅಂದದ್ದು "ಶಾಮಣ್ಣ, ನಿನ್ನ ಈ ತಂಗಿಯನ್ನು ಇನ್ನೂ ಹುಡುಗೆಯೆಂದೇ....'' ಅವಳ ಬಾಯಿಂದ ಮಾತು ಹೊರಡಲಿಲ್ಲ. ಕೂಡಲೆ ಅವಳು ಸೆರಗಿನಿಂದ ಕಣ್ಣುಗಳನ್ನೊರಸಿಕೊಂಡಳು.

ಗೋವಿಂದರಾಯನು ಅಶ್ರುಗಳಿಂದ ಯುಕ್ತವಾದ ಕಣ್ಣುಗಳನ್ನು ಮುಚ್ಚಿ 'ರಾಮ ರಾಮ' ಎಂದುಚ್ಚರಿಸಿದನು.

ಶಾಮನು ಕ್ಷಣಹೊತ್ತಿನವರೆಗೆ ಕಲ್ಲಗೊಂಬೆಯಂತೆ ಕುಳಿತು, ಬಳಿಕ ದುಃಖಾರ್ತಸ್ವರದಿಂದ ಅಂದದ್ದು: ''ಚಂದ್ರಿಕೆ, ನನ್ನನ್ನು ಕ್ಷಮಿಸು; ನಿನ್ನ ಮನಸ್ಸಿಗೆ ತಾಪವಾಗುವಂತೆ ಮಾತಾಡಿದ್ದು ನನ್ನಿಂದ ಅನುಚಿತವಾಯಿತು. ಬೇರೆ ಉಪಾಯಗಳಿಂದ ಈ ವ್ಯಾಪಾರವು ಬಗೆ ಹರಿಯದಿದ್ದರೆ ನಾನು ನಿನ್ನ ಬಳಿಗೆ ಬಂದು ಅಲಂಕಾರಗಳನ್ನು ಬೇಡಿ ತಕ್ಕೊಂಡು ಹೋಗುವೆನೆಂದು ಆಣೆಮಾಡಿ ಹೇಳುತ್ತೇನೆ; ಆದರೆ ಈಗ ನೀನು ನನ್ನ ಮಾತನ್ನು ನಡೆಸಲಿಕ್ಕೆ ಬೇಕು! ಈ ಪಾಟಲಿಗಳನ್ನು ತಿರುಗಿ ತಕ್ಕೊಂಡು ನನ್ನೆದುರಿನಲ್ಲಿ ಕೈಯಲ್ಲಿಟ್ಟುಕೋ'' ಶಾಮನು ಪಾಟಲಿಗಳನ್ನು ತೆಗೆದುಕೊಂಡು ರಮಾಬಾಯಿಯ ಕೈಯಲ್ಲಿ ಕೊಟ್ಟು ''ಅಕ್ಕ, ಇವುಗಳನ್ನು ಚಂದ್ರಿಕೆಯ ಕೈಯಲ್ಲಿಡು" ಎಂದು ಹೇಳಿದನು. ರಮಾಬಾಯಿಯು ಅವುಗಳನ್ನು ಚಂದ್ರಿಕೆಯ ಹಸ್ತಗಳಲ್ಲಿಟ್ಟಳು.

ಗೋವಿಂದರಾಯನು ಚಂದ್ರಿಕೆಯನ್ನು ಕರೆದು ಬಳಿಯಲ್ಲಿ ಕುಳ್ಳಿರಿಸಿಕೊಂಡು ಸ್ನೇಹದಿಂದ ಬೆನ್ನಮೇಲೆ ಕೈಯಾಡಿಸಿ ಅಂದದ್ದು:-''ಮಗು, ಹೀಗೆ ಮಾಡುವರೇ? ಧೈರ್ಯಗುಂದಿ ಉಪಯೋಗವಿಲ್ಲ. ಏನೋ ಒಂದು ವಿಪತ್ತು ಬಂದಿದೆ. ಕಡೆತನಕ ಇರದು. ಕಾಲಾಂತರದಲ್ಲಿ ಎಲ್ಲವೂ ಸರಿಯಾಗುವದು. ನೀನು ಯಾವದಕ್ಕೂ ಚಿಂತಿಸಬೇಡ. ಮೇಲಾಗಿ ನಿನ್ನ ಅಲಂಕಾರಗಳಿಂದ ಎಷ್ಟು ಸಾಲವು ಪರಿಹರಿಸೀತೆಂಬದನ್ನು ವಿಚಾರಿಸಿ ನೋಡು.''

ಚಂದ್ರಿಕೆಯು ಅವನತ ಮುಖಿಯಾಗಿ ಸುಮ್ಮನಿದ್ದಳು. ಆಗಲೆ 'ರಾಯರು ಮನೆಯಲ್ಲಿದ್ದಾರೆಯೋ?' ಎಂದಂತೆ ಹೊರಗೆ ಕೇಳಬಂದಿತು.

## ೧೦

**

ಗೋವಿಂದರಾಯನು ಶಾಮನೊಡನೆ ಹೊರಗೆ ಬಂದನು. ಕುಬೇರನು ವಿನಯದಿಂದ ನಮಸ್ಕರಿಸಿ, ಕುಶಲಪ್ರಶ್ನೆಗಳ ತರುವಾಯ ಹಣದ ಮಾತೆತ್ತಿದನು.

ಗೋವಿಂದರಾಯನು ವಿಷಣ್ಣಭಾವದಿಂದ ಒಮ್ಮೆ ಶಾಮನ ಕಡೆಗೆ ನೋಡಿ ಬಳಿಕ ಮೇಲಕ್ಕೆ ಮುಖವೆತ್ತಿದನು. ತರುವಾಯ ಕುಬೇರನ ಕಡೆಗೆ ಮೋರೆದಿರುವಿ ಬಾಡಿದ ಮುಖದಿಂದ "ನಿಮ್ಮ ಹಣದ ಸಲುವಾಗಿ ಬಹಳ ಪ್ರಯತ್ನಮಾಡಿದೆನು; ಆದರೆ ಕೃತಕಾರ್ಯನಾಗಲಿಲ್ಲ." ಎಂದು ಹೇಳಿದನು. ಕುಬೇರನು ತುಸ ಹೊತ್ತು ಸುಮ್ಮನೆ ಕುಳಿತು ಹೇಳಿದ್ದು:—"ನನಗೆ ಏನು ಮಾಡೆಂದು ಹೇಳುವಿರಿ? ಕಡೆಯ ಮಾತು ನುಡಿಯಿರಿ."

ಗೋವಿಂದರಾಯನು ಏನು ಮಾತಾಡಬೇಕೆಂಬದನ್ನು ಗೊತ್ತು ಮಾಡಲಾರದವನಾಗಿ ಶಾಮನ ಕಡೆಗೆ ನೋಡಿದನು. ಶಾಮನು ನಕ್ಕು:-"ಹೇಳುವದೇನು? ಅನುಗ್ರಹ ಮಾಡಿರೆಂದು ಬೇಡಿಕೊಳ್ಳುವೆವು. ದಯವಿಟ್ಟು ಇನ್ನು ಕೆಲವು ದಿನಗಳ ಅವಕಾಶ ಕೊಡಿರಿ."

ಕುಬೇರನು ಪ್ರತಿಮಾತಾಡದೆ, ಕಿಸೆಯೊಳಗಿನ ಕಾಗದದ ಗಂಟನ್ನು ಹೊರದೆಗೆದು, ಅದರಲ್ಲಿಯ ಎರಡು ಕಾಗದಗಳನ್ನು ತಕ್ಕೊಂಡು, ಗೋವಿಂದರಾಯನ ಕೈಯಲ್ಲಿ ಕೊಟ್ಟು:—"ಛಿಡೆ ವಕೀಲರ ಅಭಿಪ್ರಾಯದಂತೆ ಈ ಕಾಗದಗಳನ್ನು ನಿಮಗೆ ಕೊಟ್ಟಿದ್ದೇನೆ. ಇವುಗಳೊಂದಕ್ಕೆ ನಿಮ್ಮ ಸಹಿಮಾಡಿ ತಿರುಗಿಕೊಡಿರಿ."

ಗೋವಿಂದರಾಯನು ಕೆಲವು ಭಾಗವನ್ನು ಮಾತ್ರ ಓದಿಕೊಂಡು, ದಾವೆಯ ನೋಟೀಸೆಂಬುದನ್ನರಿತನು. ಮುಂದಿನ ಭಾಗವನ್ನು ಓದಿಕೊಳ್ಳದೆ ಕಾಗದಗಳನ್ನು ಶಾಮನ ಕೈಯಲ್ಲಿ ಕೊಟ್ಟನು.

ಶಾಮನು ನೋಟೀಸನ್ನು ಓದಿಕೊಂಡು ತುಸಹೊತ್ತು ಆಲೋಚನೆ ಮಾಡಿದನು. ಬಳಿಕ ಇನ್ನು ಕೆಲವು ಮುದ್ದತ್ತು ಕೊಡವದಕ್ಕೆ ಕುಬೇರನನ್ನು ಬಹಳವಾಗಿ ಬೇಡಿಕೊಂಡನು. ಶಾಮನ ಅಸಾಮಾನ್ಯ ಉದ್ವೇಗವನ್ನೂ ಆಗ್ರಹವನ್ನೂ ನೋಡಿ ಗೋವಿಂದರಾಯನ ಪರಿವಾರದ ಮಾತೊತ್ತಟ್ಟಿಗಿರಲಿ, ಅಭಿನಯ ಮಾಡುತ್ತಿರುವ ಕುಬೇರನ ಮನಸ್ಸಿನಲ್ಲೂ ಶಾಮನು ನಿಜವಾಗಿಯೇ ಹೇಳಿಕೊಳ್ಳುತ್ತಿರಬಹುದೆಂಬ ಭ್ರಮೆಯು ಆಗಾಗ್ಗೆ ಉಂಟಾಗುತ್ತಿದ್ದಿತು.

ಶಾಮುನ ಗುಪ್ತಸಂಚಿನಲ್ಲಿ ಗೊತ್ತಾದ ಮೇರೆಗೆ ನೀಚತನವನ್ನು ನಟಿಸಲಿಕ್ಕೆ ಅವನ ಮನಸ್ಸು ಹಿಂಜರಿಯುತೊಡಗಿತು.

ಕುಬೇರನ ಹೊಯ್ದಾಟದ ಈ ಮನಃಸ್ಥಿತಿಯನ್ನರಿತು, ಶಾಮುನ ಓಜಸ್ವಿಯಾದ ವಕ್ತೃತ್ವದ ಫಲವು ಫಲಿಸಿದೆಯೆಂದು ಗೋವಿಂದರಾಯನು ಗೊತ್ತು ಮಾಡಿಕೊಂಡು, ತಾನೂ ನಾಲ್ಕು ಅಕ್ಕೀಕಾಳ ಚಲ್ಲುವದಕ್ಕಾಗಿ ಕುಬೇರನನ್ನು ವಿಶೇಷವಾಗಿ ಸ್ತುತಿಸಿದನು. ಪ್ರಕೃತವ್ಯಾಪಾರವು ನಾಟಕವಾಗಿರದೆ ನಿಜಸಂಗತಿಯಾಗಿದ್ದರೆ, ಕುಬೇರನು ಗೋವಿಂದರಾಯನ ಅರ್ಜಿಯನ್ನು ಕೂಡಲೆ ಮಂಜೂರಿ ಮಾಡಬಹುದಾಗಿತ್ತು; ಆದರೆ ಮೊದಲಿನ ಗುಪ್ತಆಲೋಚನೆಯು ಗೊತ್ತುವಳಿಗಳಲ್ಲಿ ದಯೆಯ ಅಭಿನಯವು ಇಲ್ಲದಿರುವ ಮೂಲಕ, ಕುಬೇರನು ಗೋವಿಂದರಾಯನಿಗೆ ಕರುಣೆಯನ್ನು ತೋರುವಂತಿರಲಿಲ್ಲ. ಕಾರಣ ಅವನು ಎಲ್ಲವನ್ನೂ ಕೇಳಿಕೊಂಡು ಶಾಂತಚಿತ್ತದಿಂದ ಹೇಳಿದ್ದು:—ರಾಯರೆ, ನೀವಿಬ್ಬರೂ ಇದುವರೆಗೆ ಬಹಳವಾಗಿ ಹೇಳಿಕೊಂಡಿರಿ; ಆದರೆ ದಯೆಯು ಹುಟ್ಟಲೊಲ್ಲದು. ಬಹು ಜನರ ದೃಷ್ಟಿಯಿಂದ ನಾನು ಭಿನ್ನಪ್ರಕೃತಿಯ ಮನುಷ್ಯನಾಗಿದ್ದೇನೆ. ಸಾಲಿಗರಿಗೆ ನಾನು ಕರುಣೆಯನ್ನೆಂದೂ ತೋರಿಸುವದಿಲ್ಲ. ಇನ್ನು ಹೆಚ್ಚು ಮಾತುಗಳಿಂದ ಉಪಯೋಗವಿಲ್ಲ. ಹಣವನ್ನು ಸಲ್ಲಿಸಿರಿ; ಇಲ್ಲವೆ ನೋಟೀಸಿಗೆ ಸಹಿಮಾಡಿ ಕೊಡಿರಿ. ಇವೆರಡೂ ನಿಮಗೆ ಬೇಡಾಗಿದ್ದರೆ, ಹಾಗೆ ಸ್ಪಷ್ಟವಾಗಿ ಹೇಳಿಬಿಡಿರಿ; ನಾನು ಹೊರಟುಹೋಗುವೆನು.

"ಸಾವುಕಾರರೆ, ಹೀಗೆ ಮಾಡಿದರೆ ಹೇಗೆ? ಅವಸರ ಮಾಡಬೇಡಿರಿ. ಸಾವಧಾನದಿಂದ ಕೆಲಸವನ್ನು ಸಾಗಿಸುವದರಲ್ಲಿ ನಮಗೂ ಹಿತವುಂಟು; ನಿಮಗೂ ಹಿತವುಂಟು." ಶಾಮುನು ಅಂದನು.

"ರಾಯರೆ, ಹಿತವನ್ನು ನೋಡುತ್ತ ಕುಳಿತುಕೊಳ್ಳುವದಕ್ಕೆ ಅವಕಾಶವು ನನಗಿಲ್ಲ. ನಿಮಗೇನಾದರೂ ಮಾತನಾಡುವದಿದ್ದರೆ, ಭಿಡೆ ವಕೀಲರಿಗೆ ತಿಳಿಸಬಹುದು."

"ನಾವು ಅವರಿಗೆ ಯಾವಾಗ್ಗೆ ಭೆಟ್ಟಿಯಾಗಬೇಕು?"

"ನಿಮಗೆ ಬೇಕಾದಾಗ. ಇಂದಿನಿಂದ ಡಿಕ್ರಿ ಜಾರಿಯಾಗುವವರೆಗೆ ನಿಮ್ಮ ಇಷ್ಟವಿದ್ದಾಗ ಅವರ ಮನೆಗೆ ಹೋಗಬಹುದು."

ಶಾಮುನು ತಲೆಯಲ್ಲಾಡಿಸಿ ಹೇಳಿದ್ದು: "ಬೇಡ; ವಕೀಲರ ಸಂಗಡ ಮಾತನಾಡುವ ಮನಸ್ಸು ನಮಗಿಲ್ಲ. ಯಾವ ವ್ಯಾಜ್ಯವು ವಕೀಲರ ಅಪರೋಕ್ಷದಲ್ಲಿ ಸುಲಭವಾಗಿ ತೀರುವಂತಿರುವದೋ, ಅದೇ ನ್ಯಾಯವು ವಕೀಲರ ಬಳಿಗೆ ಹೋದರೆ ವಿಕೋಪಕ್ಕೆ ಹೋಗುವದು! ಕಾರಣ ವಕೀಲರ ಮಾತು

ನನಗೆ ಬೇಡ. ಸಾಯುವದು ಸಿದ್ಧವಿರುವಾಗ ಬಳಿಯಲ್ಲಿರುವ ರಾಮನಿಂದ ಹತನಾಗುವದನ್ನು ಬಿಟ್ಟು ರಾವಣನನ್ನು ಹುಡುಕಿಕೊಂಡು ಹೋಗುವದರಲ್ಲಿ ಬುದ್ಧಿವಂತಿಕೆಯೇನು?''

"ಹೀಗಿದ್ದರೆ ಹೇಳತಕ್ಕದ್ದನ್ನು ನನ್ನ ಮುಂದೆಯೇ ಹೇಳಿ ಬಿಡಿರಿ. ವ್ಯರ್ಥವಾಗಿ ಮಾತು ಬೆಳಿಸುವದು ಮಾತ್ರ ಬೇಡ.''

''ನಿಮಗೆ ಇಂದೇ ಹಣವು ಬೇಕಾಗಿದೆ; ನಮ್ಮ ಬಳಿಯಲ್ಲಾದರೂ ಧನ ವಿಲ್ಲ ಈ ಸ್ಥಿತಿಯಲ್ಲಿ ನಾವಿಬ್ಬರು ಕಂತವನ್ನು ಮಾಡಿಕೊಂಡು ಕೋರ್ಟಿಗೆ ಹೋಗುವಂತೆ ಮಾಡಿಕೊಳ್ಳುವುದು ವಿಹಿತವಲ್ಲವೆ?'' ಶಾಮನು ಅಂದನು.

"ನೀವನ್ನುವದು ಸರಿಯಾದದ್ದು. ಕೋರ್ಟಿಗೆ ಹೋಗಬೇಕೆಂಬ ಆಗ್ರ ಹವು ನನಗಿಲ್ಲ. ಅನಿರ್ವಾಹದ ಮೂಲಕ ನಾನು ಹಾಗೆ ಮಾಡಬೇಕಾಗಿತ್ತು. ನೀವು ಕಂತದಿಂದ ಸಾಲ ಮುಟ್ಟಿಸಲು ಸಿದ್ಧರಿದ್ದರೆ ನಾನು ಒಲ್ಲೆನೆನ್ನುವದಿಲ್ಲ. ಹೇಳಿರಿ, ಪ್ರತಿತಿಂಗಳಿಗೆ ಎಷ್ಟು ಕೊಡುವಿರಿ! ಐನೂರು ರೂಪಾಯಿಗಳನ್ನು ಕೊಡುವಿರಾ?''

''ತಿಂಗಳಿಗೆ ಐನೂರು ರೂಪಾಯಿ ಕೊಡಲಿಕ್ಕೆ ಹೇಗೆ ಆದೀತು? ನಮ್ಮ ಯೋಗ್ಯತೆಯನ್ನು ಮನದಂದು ನೀವೇ ಹೇಳಿರಿ. ಹೇಳಿಕೊಂಡರೆ ನನಗೆ ದಯ ಹುಟ್ಟದೆಂದು ನೀವು ಒಮ್ಮೆ ಸೂಚನೆ ಕೊಟ್ಟು ಬಿಟ್ಟಿರುವಿರಿ. ಅಂದಬಳಿಕ ನಾವು ಮಾತನಾಡುವುದು ಉಳಿದೇ ಇಲ್ಲ.'' ಶಾಮನು ನುಡಿದನು.

"ನಿಮ್ಮ ಯೋಗ್ಯತೆಯು ನನಗೆ ಗೊತ್ತಾಗದು. ತಿಂಗಳಿಗೆ ಎಷ್ಟು ಕೊಡ ಲಿಕ್ಕೆ ಸಾಧ್ಯವಿದೆಯೆಂಬುದನ್ನು ನೀವೇ ಒಡನುಡಿದು ಬಿಡಿರಿ.''

' ಐವತ್ತು ರೂಪಾಯಿ.''

"ಬಗೆಹರಿಯುವಂತಿಲ್ಲ.'' ಕುಬೇರನು ಹೇಳಿದನು.

"ಶಾಮ, ತುಸ ಒಳಗೆ ನಡೆ. ವಿಚಾರಿಸಿಕೊಂಡು ಬರೋಣ.' ಗೋ- ವಿಂದರಾಯನು ಅಂದನು.

"ಕಕ್ಕಾ, ಮೊದಲು ಇಲ್ಲಿ ನಿರ್ಧರ ಮಾಡಿಕೊಂಡೇ ಒಳಗೆ ಹೋ- ಗೋಣವಂತೆ ತುಸ ತಡೆ.'' ಬಳಿಕ ಶಾಮನು ಕುಬೇರನನ್ನು ಕುರಿತು "ಎಂಬ ತ್ತಕ್ಕೆ ಕಬೂಲ ಮಾಡುವಿರಾ?" ಎಂದು ಕೇಳಿದನು.

"ಇಲ್ಲ.''

"ಪೂರಾ ನೂರು ರೂಪಾಯಿಗಳು. ಇನ್ನು ನಮ್ಮ ಶಕ್ತಿ ಮೀರಿತು.'' ಗೋವಿಂದರಾಯನು ದಿಗಿಲುಗೊಂಡು ಹೋಗಿದ್ದನು. ಪ್ರತಿತಿಂಗಳಿಗೆ ನೂರು ರೂಪಾಯಿಗಳನ್ನು ಕೊಟ್ಟು ಪ್ರಪಂಚ ಸಾಗಿಸುವುದು ಹೇಗೆ? ಎಂಬ ವಿಚಾರವು

ಅವನನ್ನು ಬಲವಾಗಿ ಬಾಧಿಸುತ್ತಿತ್ತು.

"ಇನ್ನು ಹೆಚ್ಚಿಗೆ ಕೊಡಲಿಕ್ಕೆ ಆಗುವದಿಲ್ಲವೆಂದು ಹೇಳುವಿರಾ? ಆಗಲಿ. ನಿಮ್ಮ ಮಾತಿಗೆ ನಾನು ಒಪ್ಪಿಕೊಳ್ಳುತ್ತೇನೆ. ಪ್ರತಿತಿಂಗಳ ಹದಿನೈದನೇ ತಾರೀಖಿನೊಳಗಾಗಿ ನೀವು ಕಂತದ ಹಣವನ್ನು ಮುಟ್ಟಿಸಲಿಕ್ಕೆ ಬೇಕು. ಇಲ್ಲ ವಾದರೆ ಕೂಡಲೆ ದಾವೆಯನ್ನು ಮಾಡುವೆನು." ಕುಬೇರನು ಹೇಳಿದನು.

' ಸರಿಯಾದ ಮಾತು. ಈ ಮಾತಿಗೆ ಒಲ್ಲೆನೆನ್ನಲಿಕ್ಕೆ ಹೇಗೆ ಬಂದೀತು?"

"ಮೊದಲನೇ ತಿಂಗಳ ಕಂತವನ್ನು ಇಂದೇ ಕೊಡಬೇಕು" ಕುಬೇರ ನೆಂದನು.

ಶಾಮನು ನಕ್ಕು ಹೇಳಿದ್ದು—"ಇದು ಮಾತ್ರ ಸರಿಯಲ್ಲ. ತಿಂಗಳ ಇಪ್ಪತ್ತೈದನೇ ತಾರೀಖಿನ ದಿವಸ ನವಕರನ ಬಳಿಯಲ್ಲಿ ಹಣವಿರುವ ಸಂಭವ ವಿದೆಯೋ ಎಂಬದನ್ನು ವಿಚಾರಿಸಿ ನೀವು ಮಾತಾಡಬೇಕಿತ್ತು."

"ನಿಮ್ಮ ಇಚ್ಛೆಯಂತೆಯೇ ಆಗಲಿ. ಮುಂದಿನ ತಿಂಗಳವೇ ಮೊದಲಿನ ಕಂತವನ್ನು ಮುಟ್ಟಿಸುವ ಕಾಲವಾಗಲಿ. ಆಯಿತಷ್ಟೆ? ಇನ್ನು ನಾನು ಹೋಗಿ ಬರುವೆನು."

"ಐದು ನಿಮಿಷ ತಡೆಯಿರಿ" ಎಂದಂದು ಶಾಮನು ಗೋವಿಂದರಾಯ ನನ್ನು ಕುರಿತು—"ಕಕ್ಕಾ, ಒಳಗೆ ಹೋಗಿ ಬರೋಣ ನಡೆ" ಎಂದು ಅಂದನು.

ಒಳಗೆ ಹೋದ ಕೂಡಲೆ ಗೋವಿಂದರಾಯನು ಕಾತರ ಸ್ವರದಿಂದ ಅಂದದ್ದು: "ಶಾಮು, ಹೀಗೇಕೆ ಮಾಡಿದೆ? ನೀನು ಮಾಡಿದ ವ್ಯವಸ್ಥೆ ನಮಗೆ ಸರಿಯಾಗಿ ತೋರಲೊಲ್ಲದು. ತಿಂಗಳಿಗೆ ನೂರೈವತ್ತುರೂಪಾಯಿ ಸಂಬಳ. ಇದ ರಲ್ಲಿ ನೂರು ರೂಪಾಯಿ ಕೊಟ್ಟು ಹೊಟ್ಟೆಗೇನು ಕೇರು ಹಾಕಿಕೊಳ್ಳೋಣವೆ?"

ಮರೆಯಲ್ಲಿ ನಿಂತು ಕೇಳಿದ್ದ ರಮಾಬಾಯಿಗೂ, ಚಂದ್ರಿಕೆಗೂ ಶಾಮನ ವ್ಯವಹಾರವು ಮನಸ್ಸಿಗೆ ಬಂದಿರಲಿಲ್ಲ. ತಿಂಗಳಿಗೆ ನೂರು ರೂಪಾಯಿಗಳನ್ನು ಕೊಡುತ್ತ ಹೋಗುವದು ಅಸಂಭವವೆಂದೇ ಅವರು ಬಗೆದಿದ್ದರು.

ಗೋವಿಂದರಾಯನು ಶಾಮನನ್ನು ತೀರ ಒಳಗೆ ಕರೆದೊಯ್ದನು. ಯಾಕಂದರೆ ತಮ್ಮ ಮಾತುಗಳು ಹೊರಗಿನ ಸಾವಕಾರನಿಗೆ ಕೇಳಿಸಬಾರ ದೆಂದು ಅವನ ಇಚ್ಛೆಯಾಗಿತ್ತು. ರಮಾಬಾಯಿಯೂ, ಚಂದ್ರಿಕೆಯೂ ಆ ಸ್ಥಳಕ್ಕೆ ಬಂದರು.

"ತುಟ್ಟಿಯ ಕಾಲವಿದು! ಬರಗಾಲದ ಈ ವಿಚಿತ್ರ ದಿವಸಗಳಲ್ಲಿ ಪೂರಾ ಸಂಬಳವೇ ನಮಗೆ ಸಾಲದಾಗಿದೆ. ಹೀಗಿದ್ದು ತಿಂಗಳಿಗೆ ನೂರು ರೂಪಾಯಿ ಗಳನ್ನು ಕಂತ ಮುಟ್ಟಿಸುವದಕ್ಕೆ ಕಳೆದರೆ, ನಾವು ಅರ್ಧಕ್ಕಿಂತಲೂ ಹೆಚ್ಚು

ದಿವಸಗಳನ್ನು ಉಪವಾಸದಿಂದ ಕಳೆಯಬೇಕಾಗುವದು.'' ರಮಾಬಾಯಿಯು ಅಂದಳು.

ಚಂದ್ರಿಕೆಯು ಮಾತಾಡಲಿಲ್ಲ. ತಾಯಿ-ತಂದೆಗಳ ಅಭಿಪ್ರಾಯಕ್ಕೆ ಉತ್ತರರೂಪವಾಗಿ ಶಾಮನು ಏನು ಹೇಳುವನೆಂಬದನ್ನು ಕೇಳುವದಕ್ಕೆ ಉತ್ಸುಕಳಾಗಿ ನಿಂತಿದ್ದಳು.

ಶಾಮನು ಚಂದ್ರಿಕೆಯ ಮುಖವನ್ನವಲೋಕಿಸಿ, ಅವಳ ಮನೋಭಾವನೆಯನ್ನು ಗೊತ್ತುಮಾಡಿಕೊಂಡು ಬಳಿಕ ಗೋವಿಂದರಾಯನ ಕಡೆಗೆ ನೋಡಿ:—''ಕಕ್ಕಾ, ಬೇರೆ ಉಪಾಯವೇ ಇರಲಿಲ್ಲ ಇಂದು ಯಾವದೇ ರೀತಿಯಿಂದಾಗಲಿ ಸಾವುಕಾರನೊಡನೆ ರಾಜಿಮಾಡಿಕೊಳ್ಳಲೇಬೇಕು; ಇಲ್ಲದಿದ್ದರೆ ಅವನು ನಾಳೆ ದಾವೆ ದಾಖಲ ಮಾಡುವನು. ಕೋರ್ಟಿನ ಕೆಲಸವು ಬಹಳ ಜಡವಾದದ್ದು. ಕೊಡತಕ್ಕ ರೂಪಾಯಿಗಳನ್ನು ಕೊಡಲೇಬೇಕು. ಮೇಲಾಗಿ ವಕೀಲರ ಫೀ, ಕೋರ್ಟಖರ್ಚು ಕೊಟ್ಟು ಓಡಾಡುವ ದಗದಗಿಯನ್ನು ಸಹಿಸಿಕೊಳ್ಳಬೇಕು. ಇದಕ್ಕಿಂತ ಈಗ ನಾನು ಬಗೆಹರಿಸಿದ್ದು ನೆಟ್ಟಗಾಗಲಿಲ್ಲವೇ? ಕೆಲವು ದಿವಸಗಳವರೆಗೆ ಚಟ್ನಿ-ಬಕ್ಕರಿಯನ್ನು ತಿಂದು ಹೇಗಾದರೂ ಮಾಡಿ ಕಾಲಕಳೆಯಬೇಕು.''

''ಶಾಮು, ನಾನು ಬಡತನದಿಂದ ಕಾಲಕಳೆಯುವದಕ್ಕೆ ಒಲ್ಲೆನೆನ್ನುವದಿಲ್ಲ; ಆದರೆ ಬಡತನದಿಂದ ಬಾಳ್ವೆ ಮಾಡಿದರೂ ತಿಂಗಳಿಗೆ ೫೦ ರೂಪಾಯಿ ಸಾಲುವಂತಿಲ್ಲ. ವಿಮಾಕಂಪನಿಯ ಕಂತವನ್ನು ಸಲ್ಲಿಸಬೇಕು. ಅರಿವೆಯ ಅಂಗಡಿಯವನ ಬಾಕಿಯನ್ನು ತೀರಿಸಬೇಕು. ಶಾಮು, ಹೆಚ್ಚಿಗೆ ಹೇಳಲೇನು? ಐವತ್ತು ರೂಪಾಯಿಗಳು ಮೇಲು ಖರ್ಚಿಗೇನೇ ಬೇಕು. ಕಾರಣ ನಾನು ಕಂತ ಮುಟ್ಟಿಸಿ ಉಪವಾಸ ಬಿದ್ದು ಸಾಯುವದಕ್ಕಿಂತ, ದಾವೆಯ ಮಾಡಿಸಿಕೊಂಡು ಬದುಕಿರುವುದೇ ಮೇಲೆಂದು ಭಾವಿಸುತ್ತೇನೆ.''

ಶಾಮನು ನಕ್ಕು ಹೇಳಿದನು:—''ಕಕ್ಕಾ, ನೀನೆನ್ನುವುದು ಸರಿಯಲ್ಲ. ದಾವೆಯಿಂದ ನೀನು ಬದುಕುವೆನೆಂದು ಭಾವಿಸಿರುವುದು ತಪ್ಪೆಂಬುದು ಸಹಜವಾಗಿ ಹೊಳೆಯುವಂತಿದೆ. ಅದಿರಲಿ. ಕಕ್ಕಾ, ಈಗ ನಾನು ನಿನಗೆ ಇನ್ನೊಂದು ಉಪಾಯವನ್ನು ಹೇಳಿಕೊಡುವೆನು. ಅದನ್ನು ನಾವೆಲ್ಲರೂ ಒಪ್ಪಬೇಕು. ಅದರಲ್ಲಿ ಎಲ್ಲರಿಗೂ ತೊಂದರೆಯಿದೆಯೆಂಬುದು ನಿಸ್ಸಂದೇಹವಾದದ್ದು; ಯಾಕಂದರೆ ದೊಡ್ಡ ವಿಪತ್ತಿನಿಂದ ಪಾರಾಗುವುದಕ್ಕೆ ತೊಂದರೆಯಿಲ್ಲದ ಹಂಚಿಕೆಗಳು ದೊರೆಯುವುದು ದುರ್ಲಭ!''

ಶಾಮನ ಈ ದೀರ್ಘ ಉಪೋದ್ಘಾತದ ಹಂಚಿಕೆಯನ್ನು ಕೇಳುವದಕ್ಕೆ

ಎಲ್ಲರೂ ಆತುರರಾಗಿದ್ದರು. ಗೋವಿಂದರಾಯನು ವ್ಯಗ್ರತೆಯಿಂದ:-"ಶಾಮು, ಅನುಮಾನಿಸದೆ ಹೇಳು. ಅಸಂಭವವಾಗದಿದ್ದರೆ ತೀರಿತು!"

"ಅಸಂಭವವಾದದ್ದೇನೂ ಅಲ್ಲ; ಹೇಳುತ್ತೇನೆ ಕೇಳಿರಿ. ನಾನು ಕಾರ ಣಾಂತರದಿಂದ ಈ ನಗರಕ್ಕೆ ಮೇಲಿಂದಮೇಲೆ ಬರಬೇಕಾಗುತ್ತದೆ. ಒಮ್ಮೊಮ್ಮೆ ನಾಲ್ಕಾರು ದಿವಸ ಇದ್ದು, ಮತ್ತೆ ತಿರುಗಿ ಹೋಗುತ್ತೇನೆ ಒಮ್ಮೊಮ್ಮೆ ನಾಲ್ಕಾರು ತಿಂಗಳು ಇರುವ ಪ್ರಸಂಗವೂ ಬರುವದುಂಟು. ಈ ಕಾರಣದಿಂದ ನಾನು ಈ ನಗರದಲ್ಲಿ ಸ್ವತಂತ್ರ ಮನೆಯನ್ನು ಮಾಡಿಕೊಂಡು, ಅಡುಗೆಯ ಆಚಾರಿಯನ್ನು ಇಟ್ಟುಕೊಂಡು ಇದ್ದೇನೆ; ಇದಕ್ಕೋಸುಗ ನನಗೆ ತಿಂಗಳಿಗೆ ಎಪ್ಪತ್ತು-ಎಪ್ಪತ್ತೈದು ರೂಪಾಯಿಗಳನ್ನು ವೆಚ್ಚಮಾಡಬೇಕಾಗುತ್ತದೆ. ನಾನು ಹೀಗೆ ಮಾಡದೆ, ಇಲ್ಲಿಗೆ ಬರುವದನ್ನೇ ಕಡಿಮೆ ಮಾಡಿ, ಅತ್ಯವಶ್ಯದ ಪ್ರಸಂಗ ದಲ್ಲಿ ಬಂದಾಗ್ಗೆ ಸ್ನೇಹಿತರ ಮನೆಯಲ್ಲಿದ್ದು ಆ ರೂಪಾಯಿಗಳನ್ನು ಉಳಿಸಿ ನಿಮಗೆ ಕೊಡಬಲ್ಲೆನು. ಇನ್ನು ಆರು ತಿಂಗಳು ನನಗೆ ಹಣದ ಅಡಚಣಿ ಯುಂಟು ಇಷ್ಟು ದಿವಸಗಳವರೆಗೆ ಈ ನಗರದಲ್ಲಿ ಮನೆಯಿಲ್ಲದೆ ನಾನು ಹೇಗಾ ದರೂ ಮಾಡಿ ಕಾಲಕಳೆಯ ಬಲ್ಲೆನು."

ಗೋವಿಂದರಾಯನಿಗೂ ರಮಾಬಾಯಿಗೂ ಪರಮಹರುಷವಾಯಿತು. ಇಷ್ಟು ಸುಲಭವಾಗಿ ಈ ವಿಪತ್ತಿನಿಂದ ತಾವು ಪಾರಾದೇವೆಂಬ ಕಲ್ಪನೆಯು ಅವರಿಗೆ ಕನಸಿನಲ್ಲೂ ಬಂದಿರಲಿಲ್ಲ.

ಸಂತೋಷಿತನಾದ ಗೋವಿಂದರಾಯನು:—"ನೀನನ್ನುವದು ಉತ್ತ ಮವೇ ಸರಿ; ಆದರೆ ನಾನೊಂದು ಮಾತು ಹೇಳುತ್ತೇನೆ ಕೇಳು. ನಾವು ಮಾತ್ರ ನಿನ್ನವರು, ನೀನು ನಮ್ಮವನಲ್ಲವೇನು? ಹೀಗಿದ್ದ ಬಳಿಕ ಮನೆ ತೆಗೆದ ನಂತರ ಸ್ನೇಹಿತರ ಮನೆಯಲ್ಲಿ ಇದ್ದು ಹೋಗುವೆನೆಂದು ಏಕೆ ಅನ್ನುವೆ?"

"ನಾವು ಇಲ್ಲಿರುವಾಗ ನೀನು ಸ್ವತಂತ್ರ ಮನೆ ಮಾಡಿದ್ದೇ ಸರಿಯಲ್ಲ. ಹಿಂದೆ ಏನೇ ಆಗಿರಲಿ; ಇನ್ನು ಮುಂದೆ ಸುಧಾರಿಸಿಕೊಂಡರಾಯಿತು." ರಮಾ ಬಾಯಿಯು ಅಂದಳು.

"ಕಕ್ಕಿ, ನನ್ನ ತಪ್ಪನ್ನು ಪ್ರಾಂಜಲಮನಸ್ಸಿನಿಂದ ಒಪ್ಪಿಕೊಳ್ಳುತ್ತೇನೆ. ಸ್ವತಂತ್ರ ಮನೆಮಾಡಿಕೊಂಡಿದ್ದುದು ಅನ್ಯಾಯವೇ ಸರಿ. ಮುಂದೆ ಏನಾ ದರೂ ಮಾಡಿಕೊಳ್ಳಲಿಕ್ಕೆ ಬಂದೀತು. ಈಗಂತೂ ಒಪ್ಪಿಗೆಯನ್ನಿತ್ತು, ಸಾವು ಕಾರನನ್ನು ಅಟ್ಟಿಬಿಡೋಣ" ಎಂದಂದು, ಚಂದ್ರಿಕೆಯ ಕಡೆಗೆ ನೋಡಿ, "ನಾನನ್ನುವುದು ಸರಿಯಷ್ಟೆ? ನಾನು ಮಾಡಿದ ವ್ಯವಸ್ಥೆಯು ನಿನ್ನ ಮನಸ್ಸಿಗೆ ಬಂದಿತಷ್ಟೆ?" ಎಂದು ಕೇಳಿದನು.

ಚಂದ್ರಿಕೆಯು ಕೆಳಮೋರೆಯಿಂದ 'ಒಳಿತೇ ಸರಿ' ಎಂದಂದು ತಂದೆಯ ಕಡೆಗೆ ಮೋರೆ ಮಾಡಿ "ಅಪ್ಪಾ, ನನ್ನ ಆಭರಣಗಳನ್ನು ಮಾರಿದರೆ ಕನಿಷ್ಠ ಪಕ್ಷಕ್ಕೆ ಆರು ನೂರು ರೂಪಾಯಿಗಳು ಬರುವವು. ಶಾಮಣ್ಣನಿಗೆ ಆರು ತಿಂಗಳು ಹಣದ ಅಡಚಣಿಯಿದೆಯಂತೆ. ಅದುವರೆಗೆ ಕಂತುಗಳನ್ನು ಮುಟ್ಟಿಸಿದರೆ, ಮುಂದೆ ಶಾಮಣ್ಣನು ಸಹಾಯ ಮಾಡೇ ಮಾಡುವನು. ವಿಮಾಕಂಪನಿಯ ಹಣವು ಕೈಸೇರಿದ ಬಳಿಕ ನೀನು ಶಾಮಣ್ಣನ ಕೈಗಡವನ್ನು ಮುಟ್ಟಿಸಲಿಕ್ಕೆ ಬರುತ್ತದೆ. ಶಾಮಣ್ಣನ ವ್ಯವಸ್ಥೆಗಿಂತ ನಾನು ಸೂಚಿಸುತ್ತಿರುವ ಈ ವ್ಯವಸ್ಥೆಯು ಉತ್ತಮವಾಗಲಿಕ್ಕಿಲ್ಲವೆ?" ಎಂದಳು.

ಶಾಮನು ಸೂಚಿಸಿದ ಮಾರ್ಗವೇ ಉತ್ತಮವಾದದ್ದೆಂಬದನ್ನು ನಿಷ್ಕರ್ಷಿಸುವುದಕ್ಕೆ ಗೋವಿಂದರಾಯನಿಗೆ ಬಹಳ ಕಾಲವು ಬೇಕಾಗಲಿಲ್ಲ. ವ್ಯವಹಾರ ಜ್ಞಾನ ವಿಹೀನಳಾದ ಮಗಳು ತನ್ನ ಈ ಕೆಲಸಕ್ಕೆ ಅಡ್ಡಿಯನ್ನು ಒಡ್ಡಿದುದನ್ನು ನೋಡಿ, ಅವನಿಗೆ ಕೋಪವುಂಟಾಗದಿರಲಿಲ್ಲ. ಶಾಮನು ಇರುವದನ್ನು ಮನದಂದು, ಅವನು ಕೋಪವನ್ನು ಕಡಿಮೆ ಮಾಡಿಕೊಂಡು:—"ಆಭರಣಗಳನ್ನು ಮಾರುವದಕ್ಕೆ ಇಷ್ಟೇಕೆ ಉತ್ಸುಕಳಾಗಿರುವೆಯೆಂಬದೂ ನನ್ನನ್ನು ಹೀಗೇಕೆ ಪೀಡಿಸುವೆಯೆಂಬದೂ ನನಗೆ ಹೊಳೆಯದಾಗಿದೆ! 'ಇದು ನನ್ನ ಲಗ್ನದ ಸಾಲವು. ಇದನ್ನು ನಾನೇ ತೀರಿಸಲಿಕ್ಕೆಬೇಕು. ಹೀಗೆ ಮಾಡಿದರೆ ತಾಯಿ-ತಂದೆಗಳ ಋಣದಿಂದ ಮುಕ್ತಳಾದಂತಾಗುವುದು' ಎಂದು ನೀನು ತಿಳಿದಿರುವೆಯಾ?"

ಚಂದ್ರಿಕೆಗೆ ಬಹಳ ಕೆಡಕೆನಿಸಿತು ಅವಳು ಮಾತನಾಡದೆ ಸುಮ್ಮನಿದ್ದಳು. ಶಾಮನು ಚಂದ್ರಿಕೆಯ ಈ ಮನಸ್ತಾಪವನ್ನು ಹೋಗಲಾಡಿಸುವ ಉದ್ದೇಶದಿಂದ ಅಂದದ್ದು:—"ಕಕ್ಕಾ, ಹಾಗಲ್ಲ; ನಿನಗೆ ಸಹಾಯ ಮಾಡುವ ಅಧಿಕಾರವು ನನಗಿಂತಲೂ ತನಗೆ ಹೆಚ್ಚಾಗಿದೆಯೆಂದು ಚಂದ್ರಿಕೆಯ ಭಾವನೆಯು. ಅಂತೆಯೇ ಅವಳು ನನ್ನ ಸಹಾಯವನ್ನು ಬಿಟ್ಟು ತನ್ನ ಸಹಾಯವನ್ನು ಗ್ರಹಿಸಬೇಕೆಂದು ನಿನಗೆ ಹೇಳಿಕೊಳ್ಳುತ್ತಿದ್ದಾಳೆ; ಆದರೆ ಚಂದ್ರಿಕೆ, ಹೀಗೆ ನಿನ್ನ ಭಾವನೆಯಿದ್ದರೆ, ನೀನು ನನ್ನನ್ನು ಶಾಮಣ್ಣನೆಂದು ಸಂಬೋಧಿಸದೆ ಶಾಮರಾಯನೆಂದು ಸಂಬೋಧಿಸಿದ್ದರೆ ಉಚಿತವಾಗುತ್ತಿತ್ತು." ಶಾಮನು ನಗತೊಡಗಿದನು

"ನನ್ನ ಮಾತನ್ನು ನೀವೆಲ್ಲರೂ ತಿಳ್ಳಗಳೆಯುತ್ತೀರೆಂದ ಬಳಿಕ ನಾನಿನ್ನು ಯಾವ ಮಾತನ್ನೂ ಆಡುವದಿಲ್ಲ. ಶಾಮಣ್ಣಾ, ನೀನು ನಿನ್ನ ಸಾಮಾನುಗಳನ್ನು ತಕ್ಕೊಂಡು ಇಂದೇ ನಮ್ಮ ಮನೆಗೆ ಇರಲಿಕ್ಕೆ ಬಂದು ಬಿಡು!" ಎಂದು

ಚಂದ್ರಿಕೆಯು ಅಂದಳು.

“ಅದು ಮುಂದಿನ ಮಾತು. ಸದ್ಯಕ್ಕೆ ನಾವು ಹೊರಗೆ ಕುಳಿತ ಸಾವು ಕಾರನನ್ನು ಕಳುಹಿಕೊಡುವದು ಅವಶ್ಯವು. ಠಕ್ಕಾ. ನಡೆ, ಹೊರಗೆ ಹೋಗೋಣ.” ಶಾಮನು ಅಂದನು.

ಕುಬೇರನು ಗೋವಿಂದರಾಯನಿಂದ ಪ್ರತಿ ತಿಂಗಳ ನೂರು ರೂಪಾಯಿ ಗಳನ್ನು ಕೊಡುವ ಅಭಿವಚನವನ್ನು ತಕ್ಕೊಂಡು ತನ್ನ ಮನೆಗೆ ಹೋದನು.

---

## ೧೧

ಒಂದು ತಿಂಗಳು ಕ್ರಮಿಸಿದೆ. ಈ ಅವಧಿಯಲ್ಲಿ ಶಾಮನು ಗೋವಿಂದ ರಾಯನ ಮನೆಗೆ ಒಂದು ಬಾರಿಯಾದರೂ ಬಂದಿರಲಿಲ್ಲ; ಯಥಾಸಮಯದಲ್ಲಿ ಎಪ್ಪತ್ತೈದು ರೂಪಾಯಿಗಳನ್ನು ಕಳುಹಿ ಕೊಡುವದಕ್ಕೆ ಮರೆತಿರಲಿಲ್ಲ. ಗೋವಿಂದರಾಯನಾದರೂ ನಿಯಮಿತ ಸಮಯದಲ್ಲಿ ಕಂತವನ್ನು ಮುಟ್ಟಿಸಿ, ಕುಬೇರನಿಂದ ಪಾವತಿ ತಕ್ಕೊಂಡಿದ್ದನ. ಗೋವಿಂದರಾಯನು ಒಂದೆರಡು ಸಾರೆ ಶಾಮನ ವಾಸಸ್ಥಳಕ್ಕೆ ಹೋಗಿದ್ದನು; ಆದರೆ ಶಾಮನ ಭೆಟ್ಟಿಯಾಗಿರಲಿಲ್ಲ. ಶಾಮನು ನಗರದಲ್ಲಿದ್ದ ಸುದ್ದಿಯು ಮಾತ್ರ ಗೋಂದರಾಯನಿಗೆ ಗೊತ್ತಾಗಿತ್ತು.

ಅನ್ಯಾಯದ ಅಧಿಕಾರಸಂಪಾದನೆಯ ಸಾಧನಗಳಲ್ಲಿ ಬಲ-ಕೌಶಲ್ಯಗಳೇ ಪ್ರಮುಖ ಸಾಧನಗಳು. ಇವುಗಳಲ್ಲಿಯು ಕೌಶಲ್ಯವು ಮಾನವರ ಮನಸ್ಸಿನ ಮೇಲೆ ವರ್ಚಸ್ಸನ್ನು ಕೂರಿಸುವದಕ್ಕೆ ಹೆಚ್ಚು ಉಪಯುಕ್ತವಾದದ್ದು. ಮೀನವು ಜಾಲಗಾರನ ಕೋಲಿನಿಂದ ಗಾಯಗೊಂಡ ಬಳಿಕ, ಅದನ್ನು ಕೈವಶ ಮಾಡಿಕೊಳ್ಳುವದಕ್ಕೋಸುಗ ದಾರವನ್ನು ಎಳಕೊಳ್ಳುವ ಮೊದಲು ಸಡಿಲು ಬಿಡಬೇಕಾಗುತ್ತದೆ. ಶಾಮನಾದರೂ ಇದೇ ಹಂಚಿಕೆಯನ್ನವಲಂಬಿಸಿ, ಚಂದ್ರಿಕೆಯನ್ನು ಅಂಕಿತಪಡಿಸಿಕೊಳ್ಳುವ ಆಶೆಯಲ್ಲಿದ್ದನು.

ಕುಬೇರನಿಗೆ ಪ್ರತಿ ತಿಂಗಳು ನೂರು ರೂಪಾಯಿಗಳನ್ನು ಕೊಡುವ ಕರಾರು ಆದ ದಿನ ಶಾಮನು ನಾಳೆಯೇ ತಮ್ಮ ಮನೆಗೆ ಬಂದುಬಿಡುವನೆಂದು ಚಂದ್ರಿ ಕೆಯು ಭಾವಿಸಿದ್ದಳು. ಅಂತೆಯೇ ಅವಳ ಮುಖದಿಂದ “ಇಂದೇ ನಮ್ಮ ಮನೆಗೆ ಇರಲಿಕ್ಕೆ ಬಂದು ಬಿಡು” ಎಂಬ ವಾಕ್ಯವು ಹೊರ ಬಿದ್ದಿತು. ಧೂರ್ತ ನಾದ ಶಾಮನು ಚಂದ್ರಿಕೆಯ ಭಾವನೆಯನ್ನು ತಿಳಿದಿದ್ದನು; ಹಾಗು ಚಂದ್ರಿ ಕೆಯು ಬಳಿಗೆ ಪ್ರಸ್ಥಾನ ಬೆಳಸುವದಕ್ಕೆ ವಿಲಂಬ ಮಾಡದಿದ್ದರೆ, ತನ್ನ ಕಾರ್ಯ ಸಾಧನೆಗೆ ವಿಲಂಬವಾಗುವದೊಂದೂ, ತನ್ನನ್ನು ಹಿಡಿಯಗೊಟ್ಟರೆ ತಾನು ಅವ

ಳನ್ನು ಕೈವಶ ಮಾಡಿಕೊಳ್ಳುವದು ದುಸ್ಸಾಧ್ಯವೆಂದೂ ಗೊತ್ತುಮಾಡಿಕೊಂಡಿದ್ದನು. ಅಂತೆಯೇ ಅವನು ಒಂದು ತಿಂಗಳು ಮೀರಿ ಹೋಗಿದ್ದರೂ ಗೋವಿಂದ ರಾಯನ ಮನೆಗೆ ಕಾಲನ್ನು ಸಹ ಹಾಕಿರಲಿಲ್ಲ.

ಚಂದ್ರಿಕೆಗೆ ಶಾಮುನ ಈ ವರ್ತನದಿಂದ ತನ್ನ ತರ್ಕ-ವಿತರ್ಕಗಳೆಲ್ಲ ಸಟಿಯಾದವುಗಳೆಂದು ಅನಿಸಿತು. ಶಾಮುನು ತನ್ನ ಕಲ್ಪನೆಯ ಮೇರೆಗೆ ಕಾಪುರುಷನಲ್ಲವೆಂದು ಅನಿಸಿದ ಅವಳಲ್ಲಿ ಶಾಮುನ ವಿಷಯದಲ್ಲಿ ಅಂತರ್ಹಿತವಾಗುತ್ತ ನಡೆದಿದ್ದ ಕೃತಜ್ಞತೆಯು ಮತ್ತೆ ಜಾಗ್ರತವಾಯಿತು; ಆದರೆ ಇದರೊಡನೆ ಮನಸ್ಸಿನ ಗುಪ್ತ ಸ್ಥಳದಲ್ಲಿ ನಿರಾಶೆಯ ಗ್ಲಾನಿಯೂ ಉಂಟಾಯಿತು. ಆ ಗ್ಲಾನಿಯು ವೈದ್ಯನು 'ಬದುಕುವ ಆಶೆಯಿಲ್ಲ'ವೆಂದು ನಿರ್ಧರಿಸಿ ಹೇಳಿ ಹೋದ ಬಳಿಕ, ರೋಗಿಯು ಸಹಸಾ ಜೀವನದ ಹಾದಿಯಲ್ಲಿ ತಿರುಗುತ್ತಿರುವದನ್ನು ತಿಳಿದ ನಂತರ ಅನುಭವಿಸುವ ಅಪ್ರತ್ಯಾಶಿತ ಆಘಾತದಂತೆ ಇದ್ದಿತೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

ಎರಡನೆಯ ಕಂತವನ್ನು ಕೊಡುವದಕ್ಕೆ ಇನ್ನು ಎಂಟು-ಹತ್ತು ದಿವಸಗಳ ಅವಕಾಶವಿತ್ತು. ಗೋವಿಂದರಾಯನು ಹಣವನ್ನು ಹೇಗೆ ಕೂಡಿಸಲೆಂಬ ಚಿಂತೆಯಲ್ಲಿ ಬಿದ್ದಿದ್ದನು ಈ ಸಮಯದಲ್ಲಿ ಶಾಮುನ ಕಡೆಯಿಂದ ರೂಪಾಯಿಗಳು ಬಾರದೆ, ಪತ್ರವೊಂದು ಬಂದಿತು ಶಾಮುನು ಈ ಪತ್ರದಲ್ಲಿ ಪರಿವರ್ತಿತವಾದ ವಾಸಸ್ಥಳವನ್ನು ಸೂಚಿಸಿ, ಅಲ್ಲಿಗೆ ಬಂದು ಹಣವನ್ನು ತಕ್ಕೊಂಡು ಹೋಗುವಂತೆ ಬೇಡಿಕೊಂಡಿದ್ದನು.

ಸಾಯಂಕಾಲದಲ್ಲಿ ಆಫೀಸಿನ ಕೆಲಸವು ತೀರಿದ ಬಳಿಕ ಗೋವಿಂದರಾಯನು ಶಾಮುನ ವಾಸಸ್ಥಳದ ಕಡೆಗೆ ಹೊರಟನು. ಪತ್ರದಲ್ಲಿ ನಮೂದಿಸಿದ ಸ್ಥಳವನ್ನು ಹುಡುಕಲಿಕ್ಕೆ ಅವನಿಗೆ ತೊಂದರೆಯೇನೂ ಆಗಲಿಲ್ಲ. ಹೋಗಿ ನೋಡಿದನು. ಸಂದಿಯಲ್ಲಿಯದೊಂದು ಹಳೇ ಮನೆ. ನಿರ್ಮಿತವಾದಂದಿನಿಂದ ಇಂದಿನವರೆಗೆ ಸಂಸ್ಕಾರ ಹೊಂದಿರಲಿಲ್ಲವೆಂದು ಕಂಡುಬರುವಂತಿತ್ತು. ಮನೆಯ ಮುಂದಿನ ಕಟ್ಟೆಯ ಮೇಲೆ ಒಂದು ವ್ಯಕ್ತಿಯು ಕುಳಿತಿತ್ತು. ಕೃಶದೇಹ. ಕಪ್ಪು, ವರ್ಣ, ಕಪ್ಪುಗೂದಲು, ನೀರಿಗೆಗಟ್ಟಿದ ಮೋರೆ; ಇವೆರಡರಲ್ಲಿ ಯಾವದು ಅವನ ಯಥಾರ್ಥ ವಯಸ್ಸಿನ ನಿದರ್ಶಕವೆಂಬುದನ್ನು ನಿರ್ಧರಿಸುವದು ಕಠಿಣವಾಗಿತ್ತು.

ಗೋವಿಂದರಾಯನು ಆ ವ್ಯಕ್ತಿಯ ಬಳಿಗೆ ಹೋಗಿ "ಇದು ಯಾರ ಮನೆಯು?" ಎಂದು ಕೇಳಿದನು. ಆ ವ್ಯಕ್ತಿಯು ಮ್ಯಾಜಿಕ್‌ಲ್ಯಾಂಟರ್ನದ ಚಿತ್ರಪಟದಂತೆ ತನ್ನ ಶುಭ್ರವಾದ ಹಲ್ಲುಗಳನ್ನು ಪ್ರದರ್ಶಿಸಿ ಅಂದದ್ದು:-'ರಾಯರೇ, ಇದು ಮನೆಯಲ್ಲ; ಪಥಿಕಾಶ್ರಮವು. ಅಲ್ಲಿ ತೂಗ ಹಾಕಿದ ಬೋರ್ಡಿನಲ್ಲಿ

ಬರೆದಿದ್ದ 'ದಿ ಗೆರೆಟ ಕರಿನಾಟಕ ಹೊಟೇಲ' ಎಂಬುದನ್ನು ಓದಿಕೊಳ್ಳಲಿಲ್ಲ ವೇನು?''

ಗೋವಿಂದರಾಯನು ಸಾಯಂಕಾಲದ ಮಂದಪ್ರಕಾಶದಲ್ಲಿ 'ಸಾಯಿನ್ ಬೋರ್ಡು' ಓದಿಕೊಂಡು ತೀರ ಯೋಗ್ಯವಾದ ಹೆಸರೇ ಸರಿ! ಎಂದು ಮನಸ್ಸಿನಲ್ಲಿ ಅಂದುಕೊಂಡು, "ನೀವು ಇಲ್ಲೇ ಇರುವಿರಾ?" ಎಂದು ಕೇಳಿದನು.

ಆ ವ್ಯಕ್ತಿಯು ಪುನಃ ಹಲ್ಲು ಹೊರ ತೆಗೆದು ಅಂದದ್ದು:--"ಕೇವಲ ಇರುವದೇ ಏಕೆ? ನಾನು ಈ ಆಶ್ರಮದ ಮಾಲಕನು ಮತ್ತಾರೂ ಭಾಗೀದಾರರಿಲ್ಲ."

ಗೋವಿಂದರಾಯನು ಮೆಲ್ಲನೆ ನಕ್ಕು ಅಂದದ್ದು: -''ಒಳಿತೇ ಸರಿ! ಮುಖ್ಯ ಮನುಷ್ಯರ ಸಂಗಡ ಮಾತನಾಡಲು ದೊರೆತದ್ದು ನನ್ನ ಸುಭಾಗ್ಯ! ನಾನು ಶಾಮರಾವ ದೇಸಾಯಿ ಇವರ ಸಂಗಡ ಮಾತನಾಡಲಿಕ್ಕೆಂದು ಇಲ್ಲಿಗೆ ಬಂದಿದ್ದೇನೆ. ಅವರು ಒಳಗೆ ಇರುವರೇ?"

''ಓಹೋ! ಇದ್ದಾರೆ. ನೀವು ಅವರಿಗೆ ಏನಾಗಬೇಕು?"

ಗೋವಿಂದರಾಯನು ವಿಚಾರಿಸಿ ಹೇಳಿದ್ದು: ''ನಾನು ಅವರ ಕಕ್ಕನಾಗಬೇಕು."

''ನಾನು ಯಾರೋ ಅಪರಿಚಿತರೆಂದು ತಿಳಿದಿದ್ದೆನು. ಹೀಗೆ ನಿಂತುಕೊಂಡಿರೇಕೆ? ಒಳಗೆ ನಡೆಯಿರಿ. ಶಾಮರಾಯರು ಅಜಾರಿಯಲ್ಲಿದ್ದಾರೆ. ಒಳಗೆ ಮಲಗಿದ್ದಾರೆ.''

ಜಾಡ್ಯದ ಸುದ್ದಿಯನ್ನು ಕೇಳಿ, ಗೋವಿಂದರಾಯನು ಉದ್ವಿಗ್ನತೆಯಿಂದ ಶಾಮನ ಹತ್ತರ ಹೋದನು. ಒಂದು ಸಣ್ಣ ಕೋಣೆ. ಇನ್ನೂ ದೀಪವನ್ನು ಹಚ್ಚಿರಲಿಲ್ಲ. ಗೋವಿಂದರಾಯನಿಗೆ ಒಳಗಿನದೇನೂ ಕಾಣಲಿಲ್ಲ. 'ಕಕ್ಕಾ, ಇಲ್ಲಿ ಬಾ' ಎಂದು ಶಾಮನು ಕರೆದನು. ಗೋವಿಂದರಾಯನು ಸ್ವರವನ್ನನುಸರಿಸಿ ಹೋಗಿ ಶಾಮನ ಹಾಸುಗೆಯ ಬಳಿಯಲ್ಲಿ ಮಂಡಿಸಿದನು

''ಶಾಮು, ಜಡ್ಡು ಏನು?'' ಗೋವಿಂದರಾಯನು ಕೇಳಿದನು.

'ಹೇಳುವೆನು' ಎಂದಂದು ಶಾಮನು ಆಶ್ರಮದ ಮಾಲಕನನ್ನು ಕುರಿತು: "ವಿಠ್ಠಪ್ಪ, ದೀಪಹಚ್ಚಿ ಬಾಗಿಲವನ್ನು ಮುಂದಕ್ಕೆ ಮಾಡಿಕೊಂಡು ಹೋಗು" ಎಂದು ಅಪ್ಪಣೆ ಮಾಡಿದನು. ವಿಠ್ಠಪ್ಪನು ಶಾಮನ ಅಪ್ಪಣೆಯನ್ನು ಕೂಡಲೆ ಅಮಲಿನಲ್ಲಿ ತಂದನು. ಶ್ರೀಮಂತನಾದ ಶಾಮನ ವರ್ಚಸ್ಸು ಖಾನಾವಳಿಯವನ ಮೇಲೆ ಚನ್ನಾಗಿ ಕುಳಿತಿದೆಯೆಂಬುದನ್ನು ಗೋವಿಂದರಾಯನು ಮನಗಂಡನು.

ವಿಠ್ಠಪ್ಪನು ಹೋದ ಬಳಿಕ ಶಾಮನು ಹೇಳಿದ್ದು:—"ಕಕ್ಕಾ, ಅಜಾರಿಯೇನೂ ಅಂಥ ದೊಡ್ಡದಲ್ಲ; ನಾಲ್ಕೈದು ದಿವಸಗಳಿಂದ ಜ್ವರ ಬರುತ್ತಿದ್ದವು. ನಿನ್ನೆಯಿಂದ ಏನೂ ಇಲ್ಲ; ಆದರೆ ಪ್ರಕೃತಿಯು ಬಹಳ ದುರ್ಬಲವಾಗಿದೆ. ಇಲ್ಲದಿದ್ದರೆ ನಾನು ನಿನಗೆ ತೊಂದರೆ ಕೊಡುತ್ತಿದ್ದೆನೇ? ನಾನೇ ಬಂದು ರೂಪಾಯಿಗಳನ್ನು ಕೊಟ್ಟು ಬರುತ್ತಿದ್ದೆನು. ನಿನಗೆ ಬಹಳ ತ್ರಾಸಾಗಿರಬಹುದಲ್ಲವೆ?"

ಗೋವಿಂದರಾಯನು ತುಸ ಹೊತ್ತು ಸುಮ್ಮನೆ ಕುಳಿತು ಬಳಿಕ ಹೇಳಿದ್ದು: "ಅಹುದು, ನಿನ್ನ ಈ ದುರ್ವ್ಯವಹಾರದಿಂದ ನಿಜವಾಗಿಯೂ ನನಗೆ ತಾಪವಾಗುತ್ತದೆ. ಮೊದಲಿದ್ದ ಮನೆಯನ್ನು ಬಿಟ್ಟು, ಈ ಕೆಟ್ಟ ಸ್ಥಳಕ್ಕೆ ಬಂದು ಅಸ್ವಸ್ಥತೆಯನ್ನು ಅನುಭವಿಸುತ್ತಿರುವೆ; ಆದರೂ ನಿನಗೆ ನಮ್ಮ ಮನೆಗೆ ಬರಲಿಕ್ಕಾಗಲಿಲ್ಲ; ನಮಗೆ ಸುದ್ದಿಯನ್ನು ತಿಳಿಸಲಿಕ್ಕಾಗಲಿಲ್ಲ. ಇದೇ ಏನು, ನೀನು ನಮ್ಮವನೆಂದು ಹೇಳಿಕೊಳ್ಳುವದರ ಇಂಗಿತವು? ನಾನು ಈಗ ಟಾಂಗೆಯನ್ನು ತಕ್ಕೊಂಡು ಬರುತ್ತೇನೆ. ನೀನು ನಮ್ಮ ಮನೆಗೆ ಬಂದು ಬಿಡು. ಇಲ್ಲವಾದರೆ ನಾನು ನಿನ್ನಿಂದ ಹಣವನ್ನು ತಕ್ಕೊಳ್ಳತಕ್ಕವನಲ್ಲ!"

ಗೋವಿಂದರಾಯನ ಮಾತು ಕೇಳಿ ಶಾಮನಿಗೆ ಬಹಳ ಆನಂದವಾಯಿತು; ಆದರೆ ಅವನು ಅದನ್ನು ತೋರಗೊಡದೆ ಗಂಭೀರವೃತ್ತಿಯಿಂದ ತನಗಿರುವ ತೊಂದರೆಗಳನ್ನು ದೂರಿಕೊಳ್ಳತೊಡಗಿದನು ಅವುಗಳಲ್ಲಿಯ ಒಂದು ನೆವವಾದರೂ ಯೋಗ್ಯವಾದದ್ದಾಗಿರಲಿಲ್ಲ. ಈ ಕಾರಣಗಳ ಮಾಲಿಕೆಯನ್ನು ಕೇಳಿ ಗೋವಿಂದರಾಯನು ಶಾಮನು ತನ್ನ ಮನೆಗೆ ಬಾರದಿರುವದಕ್ಕೆ ಚಂದ್ರಿಕೆಯ ಅಂದಿನ ಅಶ್ಲೀಲ ವ್ಯವಹಾರವೇ ಕಾರಣವೆಂದು ಭಾವಿಸಿಕೊಂಡನು.

ಒಂದೆರಡು ತಾಸು ವಾದ-ವಿವಾದ ಮಾಡಿದರೂ, ಶಾಮನು ತನ್ನ ಮನೆಗೆ ಬರುವದಕ್ಕೆ ಒಪ್ಪದಿರುವದನ್ನು ತಿಳಿದು, ಗೋವಿಂದರಾಯನು ದುಃಖದಿಂದಲೂ ಅಭಿಮಾನದಿಂದಲೂ ಎದ್ದು ನಿಂತನು. ಶಾಮನು ಎಷ್ಟು ಬೇಡಿಕೊಂಡರೂ ಕೇಳದೆ, ರೂಪಾಯಿಗಳನ್ನು ತಕ್ಕೊಳ್ಳದೆ ಮನೆಗೆ ಹೊರಟನು.

ಪಥಿಕಾಶ್ರಮವನ್ನು ಬಿಟ್ಟು ಹೊರಬಿದ್ದ ಬಳಿಕ ಗೋವಿಂದರಾಯನ ಅಭಿಮಾನವು ಆಶಂಕೆಯಲ್ಲಿ ರೂಪಾಂತರ ಹೊಂದಿತು! ಹೀಗೆ ಮಾನಾಭಿಮಾನದ ಜಾಲದಲ್ಲಿ ಸಿಕ್ಕು, ನಿಯಮಿತ ವೇಳೆಗೆ ಕಂತವನ್ನು ಮುಟ್ಟಿಸದಿದ್ದರೆ ತನ್ನ ಅವಸ್ಥೆ ಏನಾಗುವದೋ, ಎಂಬ ಚಿಂತೆಯಿಂದ ಗೋವಿಂದರಾಯನು ಕಳವಳಗೊಂಡನು. ಸ್ವಾಭಿಮಾನದ ಮೇರೆದಪ್ಪಿದ ಅಭಿನಯವನ್ನು ತೋರಿ, ಹಣವನ್ನು ಬಿಟ್ಟು ಬಂದುದು ಅನುಚಿತವಾಯಿತೆಂದು ಪಶ್ಚಾತ್ತಾಪ ಪಟ್ಟನು.

ಗೋವಿಂದರಾಯನು ಮನೆಗೆ ಬರುತ್ತಲೆ ರಮಾಬಾಯಿಯು 'ಶಾಮನು

ಏಕೆ ಬರಲಿಲ್ಲ? ರೂಪಾಯಿಗಳನ್ನು ಕೊಟ್ಟನೋ ಇಲ್ಲವೋ?' ಎಂದು ಕೇಳಿದನು. ಚಂದ್ರಿಕೆಯು ದೂರ ನಿಂತುಕೊಂಡು ಉತ್ತರವನ್ನು ಕೇಳುವದಕ್ಕೆ ಆತುರಳಾಗಿದ್ದಳು. ಇದನ್ನು ತಿಳಿದ ಗೋವಿಂದರಾಯನ ಆಶಂಕೆಯೂ, ಅನುತಾಪವೂ ಕ್ರೋಧದಲ್ಲಿ ಪರಿಣಮಿಸಿದವು. ಗೋವಿಂದರಾಯನು ಹೆಂಡತಿಯ ಪ್ರಶ್ನೆಗಳಿಗೆ ಸಮರ್ಪಕ ಉತ್ತರ ಕೊಡದೆ, ಕ್ರುದ್ಧಸ್ವರದಿಂದ –"ಇನ್ನು ಮುಂದೆ ಸಾವುಕಾರನ ತಗಾದಿಯು ಬಂದಾಗ್ಗೆ, ಅವನನ್ನು ಸಮಾಧಾನ ಪಡಿಸಿ ತಿರುಗಿ ಕಳುಹಿಕೊಡುವ ಕೆಲಸಕ್ಕೆ ನಿನ್ನ ಮಗಳನ್ನು ಹಚ್ಚು!"

"ಯಾಕೆ, ಅವಳೇನು ಮಾಡಿದಳು?" ರಮಾಬಾಯಿಯು ಭಯದಿಂದ ಕೇಳಿದಳು.

ಗೋವಿಂದರಾಯನು ಅದೇ ಸ್ವರದಿಂದ –"ಏಕೆಂಬುದನ್ನು ಹೇಳಬೇಕೆ? ಅಂದು ಶಾಮನ ಸಂಗಡ ಅವಳು ಹೇಗೆ ವರ್ತಿಸಿದಳೆಂಬುದನ್ನು ನೀನು ಸಮಕ್ಷಮ ಇದ್ದು ನೋಡಿಲ್ಲವೆ? ಶಾಮೂನಲ್ಲಿ ಸ್ವಲ್ಪಾದರೂ ಸ್ವಾಭಿಮಾನವಿದ್ದರೆ ಅವನು ನಮ್ಮ ಮನೆಗೆ ಬರುವ ಸಂಭವವಿಲ್ಲೆಂಬದನ್ನು ಅಂದೇ ನಾನು ಗೊತ್ತು ಮಾಡಿಕೊಂಡಿದ್ದೆನು. ಪ್ರತಿತಿಂಗಳ ಎಪ್ಪತ್ತೈದು ರೂಪಾಯಿ ಕೊಟ್ಟು ಈ ಮನೆಯಲ್ಲಿ ಅಪಮಾನವನ್ನು ತಾಳಿಕೊಂಡಿರುವದಕ್ಕೆ ಅವನೇಕೆ ಮನಸ್ಸು ಮಾಡಿಯಾನು? ಏನೋ ನಮ್ಮ ಮೇಲಿನ ಮಮತೆಯ ಮೂಲಕ ಅವನು ಸ್ವಾರ್ಥತ್ಯಾಗಕ್ಕೆ ಸಿದ್ಧನಾಗಿದ್ದನು. ನಿನ್ನ ಈ ಬುದ್ಧಿಮತಿಯಾದ ಮಗಳು ಎಲ್ಲವನ್ನೂ ಕೆಡಿಸಿಬಿಟ್ಟಳು!"

"ಶಾಮು ಏನಾದರೂ ಅಂದನೇನು?"

"ಅವನೇನೂ ಅನ್ನಲಿಲ್ಲ! ಅವನು ಇದನ್ನೆಲ್ಲ ಪರಿಷ್ಕಾರವಾಗಿ ಆಡಿ ತೋರಿಸತಕ್ಕವನೇ?"

"ರೂಪಾಯಿಗಳನ್ನಾದರೂ ಕೊಟ್ಟನೇನು?"

"ಅವನು ಕೊಡಬಂದರೂ ನಾನು ತಕ್ಕೊಳ್ಳಲಿಲ್ಲ! ಅವನಿಂದ ಹಣ ತಕ್ಕೊಳ್ಳುವದು ತೀರ ಅಯೋಗ್ಯವೆಂದು ನನಗೆ ಅನಿಸಿತು! ಅದೃಷ್ಟದಲ್ಲಿದ್ದಂತಾಗಲಿ!"

ಚಂದ್ರಿಕೆಯು ಕ್ಷಣಕಾಲ ಸುಮ್ಮನೆ ನಿಂತುಕೊಂಡು, ಬಳಿಕ ಮೆಲ್ಲ ಮೆಲ್ಲನೆ ಹೋಗಿ ತನ್ನ ಕೋಣೆಯನ್ನು ಸೇರಿ, ಹಾಸುಗೆಯ ಮೇಲೆ ಬಿದ್ದುಕೊಂಡಳು. ಅಭಿಮಾನದಿಂದಲೂ ಅಪಮಾನದಿಂದಲೂ ಅವಳ ಹೃದಯವು ದಹಿಸತೊಡಗಿತ್ತು. "ಸಾವುಕಾರನನ್ನು ನಾನು ಸಮಾಧಾನಪಡಿಸಬೇಕೆಂದು ಅಪ್ಪನು ಅನ್ನುತ್ತಿರುವನು! ಏನು ವಿಪರೀತವಿದು! ಶಾಮನ ಸಲಿಗೆಗೆ ಆಸ್ಪದ

ಕೊಟ್ಟಿದ್ದರೆ, ಸಾವುಕಾರನನ್ನು ಸಮಾಧಾನಪಡಸಿದಂತಾಗುತ್ತಿತ್ತಿ? ಆಗಲಿ; ಅಭಾಗಿನಿಯಾದ ನಾನು ತಾಯಿ-ತಂದೆಗಳ ಮೇಲೆ ಉದರಪೋಷಣೆಯ ಭಾರವನ್ನು ಹೇರಿದ್ದ ಬಳಿಕ ಅವರ ಮಾತನ್ನು ಕೇಳಲೆಬೇಕಷ್ಟೆ? ಶಾಮಣ್ಣನಾದರೂ ನನಗೆ ಮಾಡುವದೇನು? ತಾಯಿ-ತಂದೆಗಳ ಪ್ರಬಲ ಇಚ್ಛೆಗೆ ನಾನು ಅಡ್ಡಿಯಾಗಬೇಕೆ? ಇದರಿಂದ ಮುಂದೆ ಏನಾದರೂ ಕೆಟ್ಟ ಪರಿಣಾಮವಾದರೆ, ಅದಕ್ಕೆ ನಾನು ಪಾತ್ರಳಲ್ಲವೇ ಅಲ್ಲ!'' ಚಂದ್ರಿಕೆಯು ಹಾಸಿಗೆಯಿಂದೆದ್ದು ದೀಪವನ್ನು ಹೊತ್ತಿಸಿದಳು ಲೇಖನ ಸಾಹಿತ್ಯಗಳನ್ನು ಸಂಗ್ರಹಿಸಿ ಒಂದು ಸಣ್ಣ ಪತ್ರಬರೆದಳು. ಬಳಿಕ ತಂದೆಯು ಕೋಣೆಗೆ ಹೋಗಿ, ಶಾಮುನ ಪತ್ತೆಯನ್ನು ಗೊತ್ತು ಮಾಡಿಕೊಂಡು ಬಂದು, ತಾನು ಬರೆದ ಪತ್ರವನ್ನು ಶಾಮುನಿಗೆ ಮುಟ್ಟಿಸುವ ವ್ಯವಸ್ಥೆಯಲ್ಲಿ ತೊಡಗಿದಳು.

---

## ೧೧

ಮರುದಿನ ಮುಂಜಾನೆ ಎದ್ದ ಬಳಿಕ ಶಾಮುನು ಗೋವಿಂದರಾಯನು ಆಫೀಸಿನಲ್ಲಿರುವ ಹೊತ್ತಿನಲ್ಲಿ ಮನೆಗೆ ಹೋಗಿ ರಮಾಬಾಯಿಯ ಕೈಯಲ್ಲಿ ರೂಪಾಯಿಗಳನ್ನು ಕೊಟ್ಟು ಬರಬೇಕು; ಹಾಗು ರಮಾಬಾಯಿಯ ಮತ್ತು ಚಂದ್ರಿಕೆಯ ಆಚರಣೆಯನ್ನೂ ಆಗ್ರಹವನ್ನೂ ನೋಡಿ ಅವರ ಮನೆಯಲ್ಲಿ ತಳವೂರುವದನ್ನು ನಿರ್ಧರಿಸಬೇಕು, ಎಂದು ಗೊತ್ತುಮಾಡಿಕೊಂಡನು. ರಮಾಬಾಯಿಯು ಮನೆಯಲ್ಲಿರುವದಕ್ಕೋಸುಗ ಬಹಳವಾಗಿ ಪೀಡಿಸುವಳೆಂಬ ವಿಶ್ವಾಸವು ಅವನಿಗಿತ್ತು. ಹೀಗೆ ಆದರೆ ಇನ್ನು ಹೋಗಿರುವದಕ್ಕೆ ಹಿಂಜರಿದರೆ ಹಿತವಿಲ್ಲವೆಂದೂ ಅವನು ಭಾವಿಸಿಕೊಂಡಿದ್ದನು.

ಶಾಮುನು ಊಟದ ತರುವಾಯದಲ್ಲಿ ಪೋಷಾಕು ಹಾಕಿಕೊಂಡು ರೂಪಾಯಿಗಳನ್ನು ತಕ್ಕೊಂಡು ಹೊರಡಲಿಕ್ಕೆ ಸಿದ್ಧನಾದನು. ಈ ಸಮಯದಲ್ಲಿ ಪೋಸ್ಟಮನ್ನನು ಬಂದು ಪತ್ರವನ್ನು ತಂದು ಕೊಟ್ಟನು. ಶಾಮನು ಅಪರಿಚಿತ ಅಕ್ಷರಗಳಿಂದ ಕುತೂಹಲವಶನಾಗಿ ಕೂಡಲೆ ಪತ್ರವನ್ನೋದಿಕೊಂಡನು. ಅದು ಚಂದ್ರಿಕೆಯಿಂದ ಬರೆಯಲ್ಪಟ್ಟಿತು:—

ಶಾಮಣ್ಣಾ,

ಕಳೆದ ೧॥ ತಿಂಗಳಲ್ಲಿ ನೀನು ಒಮ್ಮೆಯೂ ನಮ್ಮ ಮನೆಗೆ ಬರಲಿಲ್ಲ. ಅಸ್ವಸ್ಥ ಶರೀರನಾಗಿ ಖಾನಾವಳಿಯಲ್ಲಿ ಇರುವ ಪ್ರಸಂಗ ಬಂದಿದ್ದರೂ ನಮ್ಮ

ಮನೆಗೆ ಬರಲಿಕ್ಕೆ ಅಲ್ಲಗಳೆದೆಯೆಂದು ಅಪ್ಪನು ಹೇಳಿದನು. ಕೇಳಿ ಅತ್ಯಂತ ವಿಷಾದವಾಯಿತು. ನನ್ನ ಅಪರಾಧಕ್ಕೋಸುಗ ನೀನು ಕೋಪಗೊಂಡು ಹೀಗೆ ಮಾಡುತ್ತಿದ್ದರೆ, ನಾನು ಕ್ಷಮಿಸೆಂದು ಹೇಳಿಕೊಳ್ಳುತ್ತೇನೆ. ಈಗ ನಾನು ನಿನಗೆ ಬೇಡಿಕೊಳ್ಳುವದೇನಂದರೆ –ಈ ಪತ್ರ ಮುಟ್ಟಿದೊಡನೆಯೇ ನೀನು ನಿನ್ನ ಸಾಮಾನುಗಳನ್ನೆಲ್ಲ ತಕ್ಕೊಂಡು ನಮ್ಮ ಮನೆಗೆ ಬಂದು ಬಿಡಬೇಕು ಅಣ್ಣಾ, ತಂಗಿಯ ಈ ಪ್ರಾರ್ಥನೆಯನ್ನು ಮನ್ನಿಸಲಾರೆಯಾ? ನೀನು ಬಾರದಿರುವದರಿಂದ ನನಗಾಗಬಹುದಾಗಿದ್ದ ದುಃಖವನ್ನು ಈ ಪತ್ರದಲ್ಲಿ ಸ್ಪಷ್ಟಗೊಳಿಸಲಿಕ್ಕೆ ಸಾಧ್ಯವಿಲ್ಲ!

ನಾನು ಮತ್ತೊಂದು ಮಾತು ನಿನಗೆ ಕೇಳಿಕೊಳ್ಳುತ್ತೇನೆ-ಈ ಪತ್ರವನ್ನು ನೀನು ಬೇರೆ ಯಾರಿಗೂ ತೋರಿಸಬೇಡ. ನಾಳೆ ಬಂದಾಗ್ಗೆ ಈ ಪತ್ರವನ್ನು ನೀನು ನನಗೆ ತಂದು ಕೊಡಬೇಕು. ಇತಿ.

ಪತ್ರವನ್ನೋದಿ ಶಾಮನು ಪರಮಾನಂದವನ್ನು ತಾಳಿದನು. ಖಾನಾವಳಿಯ ಸೇವಕನನ್ನು ಕರೆದು, ಒಂದು 'ಎಕ್ಕಾಗಾಡಿ'ಯನ್ನು ತರುವಂತೆ ಆಜ್ಞಾಪಿಸಿದನು. ತರುವಾಯ ಚಂದ್ರಿಕೆಯ ಪತ್ರದ ಉತ್ತರವನ್ನು ಬರೆಯಲಿಕ್ಕೆ ಕುಳಿತನು —

"ಪ್ರಿಯ ಚಂದ್ರಿಕೆ,

ನಿನ್ನ ಕೃಪಾಪತ್ರವನ್ನೋದಿ ಬಹಳ ಸಂತೋಷವಾಯಿತು. ಡಾಕ್ಟರ ಭಡಕಮಕರರವರ ಜಹಾಲ ಔಷಧದ ನಾಲ್ಕು ಶೀಶೆಗಳನ್ನು ಬರಿದು ಮಾಡಿದ್ದರೂ ಕಾಣದಿರುವ ಗುಣವು ನಿನ್ನ ಈ ಹೋಮಿಓಪಾಥಿಕ ಔಷಧದ ಒಂದೇ ಒಂದು ಬಿಂದುವಿನಿಂದ ಸ್ಪಷ್ಟವಾಗಿ ತೋರಿತು! ಐದು ಮಿನಿಟುಗಳ ಹಿಂದೆ ದುರ್ಬಲತೆಯ ಮೂಲಕ ತಲೆಯೆತ್ತಲಾಗುತ್ತಿರಲಿಲ್ಲ. ಈಗಾದರೋ ನೆಟ್ಟಗೆ ಕುಳಿತು ಈ ಪತ್ರವನ್ನು ಬರೆಯತೊಡಗಿದ್ದೇನೆ.

ನಾನು ನಿನ್ನ ಬಳಿಗೆ ಬರಬೇಕೆಂದು ಅಪ್ಪಣೆ ಮಾಡಿರುವೆ. ನಿನ್ನ ಈ ಆಜ್ಞೆಯನ್ನು ಅಲ್ಲಗಳೆಯುವದಕ್ಕೆ ನನಗೆ ಸಾಧ್ಯವೇ? ದೇಹವು ದುರ್ಬಲವಿರದಿದ್ದರೆ, ಕೂಡಲೆ ನಿನ್ನ ಹುಕುಂ ಅಮಲಿನಲ್ಲಿ ತಂದುಬಿಡುತ್ತಿದ್ದೆನು! ಶರೀರದ ಅಶಕ್ತತೆಯ ನೆವವನ್ನು ಹೇಳಿ, ಆಜ್ಞಾಭಂಗಕ್ಕೆ ಪ್ರವೃತ್ತನಾಗಿರುವನೆಂದು ಕೋಪಗೊಳ್ಳದಿರು! ನಾಳೆಯೇ ನಿನ್ನ ಬಳಿಗೆ ಬಂದು ಹಾಜರಾಗುವೆನು.

ನಿನ್ನ ಎರಡನೆಯ ಅಪ್ಪಣೆಯನ್ನು ಅಂಶತಃ ಪಾಲಿಸಬಲ್ಲೆನು. ನಿನ್ನ ಆದೇಶದಂತೆ ಪತ್ರವನ್ನು ಎರಡನೆಯವರಿಗೆ ತೋರುವದಿಲ್ಲವೆಂದು ನಾನು ನಿನಗೆ ವಚನವನ್ನು ಕೊಡುತ್ತೇನೆ; ಆದರೆ ನಿನ್ನ ಇಷ್ಟದಂತೆ ಪತ್ರವನ್ನು ನಿನಗೆ ತಿರುಗಿ

ಕೊಡುವದು ಮಾತ್ರ ಸಾಧ್ಯವಿಲ್ಲ. ಯಾಕೆಂಬುದು ನಿನಗೆ ಗೊತ್ತೇ ಇದೆ! ಹಲವು ಬಾರಿ ಹಲವು ವಿಧವಾಗಿ ವಿಚಾರಿಸಿ ಮನಸ್ಸಿನೊಳಗೆ ಯಾವ ಸಂದೇಹ ವನ್ನು ತಂದುಕೊಂಡಿರುವೆಯೋ, ಆ ಸಂದೇಹಕ್ಕಾಗಿಯೇ ನಾನು ನಿನಗೆ ಈ ಪತ್ರವನ್ನು ತಿರುಗಿಕೊಡಲಾರೆನು.

ನಾಳೆಯೇ ನಿನ್ನ ದರ್ಶನವಾಗುತ್ತಿದೆಯೆಂದ ಬಳಿಕ 'ಅಲಮಿತಿ ವಿಸ್ತ ರೇಣ' ಎಂದಂದು ಈ ಪತ್ರವನ್ನು ಮುಗಿಸುತ್ತೇನೆ. ಇತಿ"

ಶಾಮನು ಪತ್ರವನ್ನು ಮಡಚಿ ಪಾಕೇಟಿನಲ್ಲಿ ಹಾಕಿ ಕಿಸೆಯಲ್ಲಿಟ್ಟುಕೊಂ ಡನು. ತರುವಾಯ ಸೇವಕನು ತಂದು ನಿಲ್ಲಿಸಿದ್ದ ಗಾಡಿಯಲ್ಲಿ ಟ್ರಂಕನ್ನೂ ಹಾಸುಗೆಯ ಸುರುಳಿಯನ್ನೂ ಇಡಿಸಿ, ಗೋವಿಂದರಾಯನ ಮನೆಗೆ ಪ್ರಯಾಣ ಬೆಳಿಸಿದನು.

ರಮಾಬಾಯಿಯು ದಿನದಂತೆ ಮಲಗಿದ್ದಳು. ಚಂದ್ರಿಕೆಯು ಹಾಸು ಗೆಯ ಮೇಲೆ ಮಲಗಿ ಪುಸ್ತಕವನ್ನೋದುತ್ತ ನಿದ್ರೆ ಹಾಗು ಜಾಗರಣೆಗಳ ಮಧ್ಯದಲ್ಲಿದ್ದಳು. ಈ ಸಮಯದಲ್ಲಿ ಶಾಮನ ಒಂಟೆತ್ತಿನ ಬಂಡಿಯು ಬಾಗಿಲದ ಬಳಿಗೆ ಬಂದಿತು. ಚಂದ್ರಿಕೆಯು ಶಬ್ದಶ್ರವಣದಿಂದ ಪೂರ್ಣ ಜಾಗ್ರತಳಾಗಿ ಕಿಡಕಿಯ ಹತ್ತಿರ ಹೋಗಿ ಹೊರಗೆ ನೋಡಿದಳು. ಶಾಮನು ಬಂಡಿಯಿಂ ದಿಳಿಯುತ್ತಿರುವದು ಕಂಡು ಬಂತು. ಅವಳು ಅವ್ವನನ್ನು ಎಬ್ಬಿಸಬೇಕೆಂದು ಮೊದಲು ಆಲೋಚಿಸಿದಳು; ಆದರೆ ಕೂಡಲೆ ಆ ಆಲೋಚನೆಯನ್ನು ರಹಿತ ಪಡಿಸಿ, ತಾನೇ ಹೋಗಿ ಬಾಗಿಲವನ್ನು ತೆರೆದಳು.

ಶಾಮನು ತಂದಿದ್ದ ಸಾಮಾನುಗಳನ್ನು ಹೊರಮನೆಯಲ್ಲಿರಿಸಿ, ಬಂಡಿ ಯವನ ಬಾಡಿಗೆಯನ್ನು ಕೊಟ್ಟು ಕಳುಹಿ, ಮನೆಯನ್ನು ಹೊಕ್ಕನು. ಕಣ್ಣಿಗೆ ಬಿದ್ದ ಚಂದ್ರಿಕೆಯನ್ನುದ್ದೇಶಿಸಿ, "ಕಕ್ಕಿ ಎಲ್ಲಿರುವಳು?" ಎಂದು ಕೇಳಿದನು.

"ಮಲಗಿದ್ದಾಳೆ."

"ಹರಿಯು?"

"ಶಾಲೆಗೆ ಹೋಗಿದ್ದಾನೆ."

"ಕಕ್ಕನಂತೂ ಆಫೀಸಿಗೆ ಹೋಗಿರಬಹುದು."

"ಹೌದು."

"ಹಾಗಾದರೆ ನಿನ್ನ ಹೊರತು ನನಗೆ ಅನ್ಯ ಆಸರವಿಲ್ಲ." ಶಾಮನು ನಕ್ಕು ಅಂದನು.

"ಅವ್ವನನ್ನು ಎಬ್ಬಿಸುವೆನು. ಒಳಗೆ ನಡೆ."

ಕಕ್ಕಿಯನ್ನು ಎಬ್ಬಿಸುವ ಮೊದಲು ನಿನ್ನ ಸಂಗಡ ಒಂದೆರಡು ಮಾತು

ಗಳನ್ನಾಡಬೇಕಾಗಿದೆ. ಇದಕ್ಕೆ ನೀನು ಪರವಾನಿಗೆ ಕೊಡಬಲ್ಲೆಯಾ?''

ಚಂದ್ರಿಕೆಯು ಇಚ್ಛೆಯಿರದಿದ್ದರೂ ಉತ್ಸುಕತೆಯ ಮೂಲಕ 'ಆಗಲಿ' ಎಂದಳು.

ಶಾಮನು ತನ್ನ ವಿಚಿತ್ರ ಕುಶಲತೆಯಿಂದ ಸ್ವರವನ್ನು ಪರಿವರ್ತನೆಗೊಳಿಸಿ ಅಂದದ್ದು: "ನಿನ್ನೆ ಶಕ್ಕನು ನನ್ನ ವಾಸಸ್ಥಳಕ್ಕೆ ಬಂದು ನನ್ನನ್ನು ಬಹಳವಾಗಿ ಪೀಡಿಸಿದನು! ನಾನು ಬರಲಿಕ್ಕೆ ಒಪ್ಪಲಿಲ್ಲ. ಆ ನಾನು ಇಂದು ನಿನ್ನ ಎರಡು ಸಾಲುಗಳ ಪತ್ರವನ್ನು ಕಂಡಾಕ್ಷಣವೇ ಹೊರಟು ಬಂದೆನು. ಇದು ಜನರಿಗೆ ತಿಳಿದರೆ ಏನಂದಾರು?''

ತಾನು ಶಾಮನಿಗೆ ಪತ್ರ ಬರೆವುದೂ ಹಾಗು ಪತ್ರದಲ್ಲಿ ಶಾಮನ ವಿಷಯದಲ್ಲಿ ವಿಶ್ವಾಸವನ್ನು ತೋರ್ಪಡಿಸಿರುವದೂ ಮಹದನ್ಯಾಯವಾಯಿತೆಂದು ಚಂದ್ರಿಕೆಯು ಅರಿತಳು. ಈ ತುಚ್ಛವೂ ಸಾಮಾನ್ಯವೂ ಆದ ಸಾಧನವನ್ನೆತ್ತಿ ಹಿಡಿದು ಶಾಮನು ವಿಚಿತ್ರವಾದೊಂದು ಸಂಗತಿಯನ್ನು ಸಿದ್ಧಗೊಳಿಸುವ ಪ್ರಯತ್ನದಲ್ಲಿದ್ದುದನ್ನು ಚಂದ್ರಿಕೆಯು ತಿಳಿದು, ದುಸ್ಸಹವಾದ ವಿಸ್ಮಯದಿಂದ ಕ್ಷಣ ಹೊತ್ತು ಸುಮ್ಮನೆ ನಿಂತಳು. ಬಳಿಕ ನಕ್ಕು ಹೇಳಿದ್ದು: "ಶಾಮಣ್ಣಾ, ಜನರು ಏನಂದಾರೆಂದು ಕೇಳಿದೆಯಲ್ಲವೆ? ಅನ್ನುವದೇನು? ಗೋವಿಂದರಾಯನು ಮನೆಮುಟ್ಟ ಹೋಗಿ ಕರೆದರೂ ಶಾಮರಾಯನು ಬಾರದಿರುವದು ಒಂದು ಅನ್ಯಾಯ; ನಿನ್ನೆ ಬಾರದಿರುವ ಶಾಮರಾಯನು ಇಂದು ಬಂದದ್ದು ಮತ್ತೊಂದು ಅನ್ಯಾಯ; ಮತ್ತು ಈ ಸಂಗತಿಯನ್ನು ಅವನು ಆಡಿ ತೋರುವುದು ಎಲ್ಲಕ್ಕೂ ಹೆಚ್ಚಿನ ಅನ್ಯಾಯ!''

ಮುಂದೆ ಶಾಮನು ಸರಿಯಾಗಿ ಮಾತಾಡಲಿಲ್ಲ. ಚಂದ್ರಿಕೆಯು ಶಾಮನ ಈ ಅಸಂಬದ್ಧ ಬಡಬಡಿಕೆಗಳಿಗೆ ಉತ್ತರ ಕೊಡುವುದು ನಿಷ್ಪ್ರಯೋಜನವೆಂದು ಭಾವಿಸಿ, ತನ್ನ ಪತ್ರವನ್ನು ತಿರುಗಿ ಕೊಡುವಂತೆ ಶಾಮನನ್ನು ಕೇಳಿಕೊಂಡಳು.

ಶಾಮನು ನಕ್ಕು ಹೇಳಿದ್ದು:—ಅದನ್ನು ಹೇಗೆ ಕೊಡಲಿಕ್ಕೆ ಬಂದೀತು? ಅದೊಂದು ಪ್ರಮಾಣಪತ್ರವು! ಅವನ್ನು ಕೈಯೊಳಗಿಂದ ಕಳಕೊಳ್ಳಲಾರೆನು! ನಿನ್ನ ಆ ಪ್ರಮಾಣಪತ್ರದ ಬದಲು ನಾನೊಂದು ಪತ್ರವನ್ನು ಕೊಡುತ್ತೇನೆ, ತಕ್ಕೋ. ನೀನಿದನ್ನು ನಿನ್ನ ಪತ್ರದ ರಸೀದಿಯೆಂದು ಭಾವಿಸಿ ಕಾಯ್ದುಕೊಂಡಿಟ್ಟುಕೊಳ್ಳು!'' ಬಳಿಕ ಶಾಮನು ತಾನು ತಕ್ಕೊಂಡು ಬಂದಿದ್ದ ಪತ್ರವನ್ನು ಚಂದ್ರಿಕೆಯ ಕೈಯಲ್ಲಿ ಕೊಟ್ಟನು.

ಚಂದ್ರಿಕೆಯು ಅದನ್ನು ತಿರುತಿರುವಿ ನೋಡಿ 'ಇದೇನು?' ಎಂದು ಕೇಳಿದಳು.

ಶಾಮನು ಹಾಸ್ಯಮುಖದಿಂದ ಮಾತಾಡಿದ್ದು:—"ನಿನ್ನ ಪತ್ರದ ಉತ್ತರವು. ಮೊದಲು ನಾಳೆ ನಿನ್ನ ಭೆಟ್ಟಿಗೆ ಬರಬೇಕೆಂದು ನಿರ್ಧರಿಸಿಕೊಂಡು ಈ ಪತ್ರವನ್ನು ಬರೆದಿದ್ದೆನು. ಬಳಿಕ ಹುಕುಮನ್ನು ಕೂಡಲೆ ಜಾರಿಯಲ್ಲಿ ತರದಿದ್ದರೆ ದೊಡ್ಡ ಶಿಕ್ಷೆಗೆ ಗುರಿಯಾಗಬೇಕಾದೀತೆಂಬ ಭಾವನೆಯು ಹುಟ್ಟಿದ್ದರಿಂದ, ಬಂಡಿಯನ್ನು ಬಾಡಿಗೆ ಮಾಡಿಕೊಂಡು ಕೂಡಲೆ ಹೊರಟುಬಿಟ್ಟೆನು."

ಚಂದ್ರಿಕೆಯು ಬೇರೆ ಕಡೆಗೆ ಮೋರೆ ಮಾಡಿ "ಶಾಮಣ್ಣಾ, ತಂಗಿಯು ಅಣ್ಣನಿಗೆ ಶಿಕ್ಷೆಯು ವಿಧಿಸಿದ್ದುಂಟೇ?" ಎಂದು ಕೇಳಿದಳು.

"ಚಂದ್ರಿಕೆ, ನಾನು ನಿನ್ನ ಈ ಪ್ರಶ್ನೆಗೆ ಉತ್ತರವನ್ನು ಕೊಡಲಾರದವನಾಗಿದ್ದೇನೆ. ಯಾಕಂದರೆ, ಚಿಕ್ಕಂದಿನಿಂದಲೂ ಅಕ್ಕ-ತಂಗಿಯರೊಡನೆ ನನ್ನ ವ್ಯವಹಾರವಿಲ್ಲ; ಆದರೆ ನಾನು ನಿನಗೆ ಒಬ್ಬ ಕಾಮಿನಿಯು ತನ್ನ ಪ್ರೇಮಿಯ ಮೇಲೆ ಎಷ್ಟು ಅಧಿಕಾರವನ್ನು ನಡೆಸಬಲ್ಲಳೋ ಅಷ್ಟೋ ಅಧಿಕಾರವನ್ನು ನನ್ನ ಮೇಲೆ ನೀನು ನಡೆಸಬಹುದೆಂಬದನ್ನು ಮಾತ್ರ ನಿರ್ಧಾರದಿಂದ ಹೇಳಿಕೊಡುತ್ತೇನೆ! ಅರ್ಥಾತ್, ನೀನು ನನ್ನನ್ನು ತಿರಸ್ಕರಿಸಬಹುದು--ಪುರಸ್ಕರಿಸಲೂ ಬಹುದು! ನಾನು ಆ ಪುರಾಣ ಕಾಲದ ವಿಷಮತೆಯ ವಾದಿಯಲ್ಲ; ಈ ಇಪ್ಪತ್ತನೆಯ ಶತಮಾನದ ಸಮತೆಯ ವಾದಿಯು. ಅರ್ಥಾತ್, ನನ್ನಲ್ಲಿ ನಾನು ಅಣ್ಣನು, ನೀನು ತಂಗಿಯು; ನಾನು ಹಿರಿಯನು, ನೀನು ಕಿರಿಯಳು ಮೊದಲಾದ ಉಚ್ಚ-ನೀಚ ಭಾವನೆಗೆ ಆಸ್ಪದವಿಲ್ಲ ಎಲ್ಲರೂ ಸಮಾನರೆಂದೇ ನಾನು ತಿಳಿಯುತ್ತೇನೆ ಸಾಹೇಬ ಜನರ ಅನುಕರಣದಿಂದ ನೀನು ಹೀಗೆ ಅನ್ನುತ್ತಿರುವೆಯೆಂದು ನೀನು ನನ್ನನ್ನು ತಿರಸ್ಕರಿಸಿದರೂ ಚಿಂತೆಯಿಲ್ಲ. ನನಗಾದರೋ ಸಾಹೇಬರ ಆಚಾರ-ವಿಚಾರಗಳು ಅತ್ಯುತ್ತಮವೆಂದೆನಿಸುತ್ತವೆ; ಹಾಗು ನಮ್ಮ ಸಮಾಜದಲ್ಲಿಯೂ ಈ ತರದ ಪರಿವರ್ತನೆಯಾಗಬೇಕೆಂದು ಮನಃಪೂರ್ವಕವಾಗಿಯೂ ಅನಿಸುತ್ತದೆ. ಸಾಹೇಬರು ಅಣ್ಣ-ತಂಗಿಯರ ಸಂಬಂಧವು ಸಮಾನ ಅಧಿಕಾರದ್ದೆಂದು ತಿಳಿಯುತ್ತಾರೆ; ಅವರು ಸಹೋದರರಾಗದಿದ್ದರೆ ತೀರಿತು; ಮೊದಲು ಅಣ್ಣ-ತಂಗಿಯರಾಗಿದ್ದವರು ಮುಂದೆ ಗಂಡ-ಹೆಂಡಿರಾಗಲಿಕ್ಕೂ ಅವರಲ್ಲಿ ಪ್ರತಿಬಂಧವಿಲ್ಲ"

ಶಾಮನ ಈ ದೀರ್ಘ ಹಾಗು ಗೂಢ ಭಾಷಣದಿಂದ ಚಂದ್ರಿಕೆಗೆ ಸಿಟ್ಟು ಬಂದಿತು. ಅವಳು ಕ್ರೋಧಕಂಪಿತಸ್ವರದಿಂದ ಹೇಳಿದ್ದು:—"ಅಣ್ಣಾ, ಆ ಪುರಾಣಕಾಲದ ನಿಯಮ-ವ್ಯವಹಾರಗಳು ಎಷ್ಟೇ ಕೆಟ್ಟವೆಂದು ನೀನು ಅನ್ನಲೊಲ್ಲೆಯೇಕೆ; ನನಗೆ ಅವೇ ಸೇರಹತ್ತಿವೆ. ನಿನ್ನ ಈ ಇಪ್ಪತ್ತನೇ ಶತಮಾನದ ಭಾವನೆಗಳು ನನಗೆ ಬೇಕಿಲ್ಲ! ಅಣ್ಣಾ, ನಿನ್ನ ಈ ಸುಧಾರಿಸಿದ ವಿಚಾರತರಂಗ

ಗಳು...." ಅವಳು ಮಾತನಾಡುವದನ್ನು ಅರ್ಧಕ್ಕೇನೇ ನಿಲ್ಲಿಸಿದಳು. ಮುಂದಿನ ಕಟುಶಬ್ದಗಳನ್ನು ಉಚ್ಚರಿಸುವ ಇಚ್ಛೆಯು ಆವಳಿಗಿರಲಿಕ್ಕಿಲ್ಲ; ಅಥವಾ ಕೋಪಾತಿರೇಕದಿಂದ ಅವಳ ಕುತ್ತಿಗೆಯು ಬಿಗಿದು ಬಂದಿರಬಹುದು.

ತನ್ನ ಮಾತಿನ ಪರಿಣಾಮವು ಹೀಗೆ ಕಟುವಾದುದನ್ನು ನೋಡಿ ಶಾಮನು ಮುಖದಲ್ಲಿ ಕಾತರಭಾವವನ್ನು ತಂದುಕೊಂಡು ಅಂದದ್ದು:—"ಚಂದ್ರಿಕೆ, ನಾನು ಮಾತಿನ ಭರದಲ್ಲಿ ಅಜ್ಞಾನವಶನಾಗಿ ಯಾವದೊಂದು ಮಾತನಾಡಿ ನಿನಗೆ ಸಂತಾಪವಾಗುವಂತೆ ಮಾಡಿದ್ದರೆ, ಕ್ಷಮಿಸೆಂದು ಅಂಗಲಾಚಿ ಬೇಡಿ ಕೊಳ್ಳುತ್ತೇನೆ. ನೀನು ಒಂದು ಸಂಗತಿಯನ್ನು ಮನದಂದಿದ್ದರೆ ಈ ರೀತಿ ನನ್ನ ಮೇಲೆ ಸಿಟ್ಟಿಗೇಳುತ್ತಿರಲಿಲ್ಲ. ತಂಗೀ, ಈ ಸಂಸಾರದಲ್ಲಿ ನನ್ನ ವರೆನ್ನುವವರು ನಿಮ್ಮ ಹೊರತು ಬೇರೆ ಯಾರೂ ಇಲ್ಲ. ನಾನಿದುವರೆಗೆ ಪ್ರೇಮ, ಮಮತೆ ಮೊದಲಾದವುಗಳನ್ನು ಅನುಭವಿಸಿದವನಲ್ಲ. ನಾನು ನಿಮ್ಮಿಂದ ಇವುಗಳನ್ನು ಸಂಪೂರ್ಣವಾಗಿ ಹೊಂದಬೇಕೆಂದು ಆಶಿಸಿದರೆ ತಪ್ಪುಗಾರನಾಗುವೆನೇನು? ಬರಗಾಲದಲ್ಲಿ ಸಿಕ್ಕು ಕೂಳು-ಕೂಳೆಂದು ಚಟಪಡಿಸುತ್ತಿರುವ ಮನುಷ್ಯನನ್ನು ಕರೆಮೊಯ್ದು ಪಕ್ವಾನ್ನಗಳಿಂದ ತುಂಬಿದ ತಾಟುಗಳ ಮುಂದೆ ಕುಳ್ಳಿರಿಸಿದಾಗ ಅವನು ತುಸ ಅಸಹ್ಯ ವರ್ತನವನ್ನು ಮಾಡಿದರೆ, ಅವನನ್ನು ತಿರಸ್ಕರಿಸಲಿ ಕ್ಕಾದೀತೇನು? ತಿರಸ್ಕರಿಸಲೇಬೇಕೆಂದು ನಿನ್ನ ಮತವಿದ್ದರೆ, ಕಂಗಾಲನಿಗೆ ಧಾನ್ಯದ ರಾಶಿಯನ್ನು ತೋರಬೇಡ! ತೋರಿಸಿದಿಯೆಂದರೆ ಹಸಾಸಿಸಿದ ಅವನು ಅತಿರೇಕವನ್ನು ಆಚರಿಸತಕ್ಕವನೇ!"

ಚಂದ್ರಿಕೆಯ ಕೋಪವು ಕೆಲಮಟ್ಟಿಗೆ ಶಾಂತವಾಯಿತು. ತುಸು ದಯವೂ ಉಂಟಾಯಿತು. ಅವಳು "ಅಣ್ಣಾ, ನಾನು ನಿನಗೆ ಯಾವ ದುಷ್ಟ ಮಾತನ್ನೂ ಆಡಲಿಲ್ಲವಲ್ಲ!" ಎಂದು ಅಂದಳು.

ಶಾಮನು ನಗೆಮುಖದ ಶಾಂತಸ್ವರದಿಂದ "ಇಲ್ಲ, ಆಡಲಿಲ್ಲ! ನೀನು ಅಶಿಷ್ಟವಚನಗಳನ್ನಾಡತಕ್ಕವಳೇ ಅಲ್ಲ! ಇರಲಿ. ನಾನು ಹೇಳಬೇಕಾಗಿದ್ದು ದನ್ನು ಹೇಳಿದೆನು. ಇನ್ನು ಕಕ್ಕಿಯನ್ನು ಎಬ್ಬಿಸು ನಡೆ" ಎಂದು ಹೇಳಿದನು. ಬಳಿಕ ಅವನು ತುಸ ತಡೆದು ಒಳಗೆ ಹೋಗುತ್ತಿದ್ದ ಚಂದ್ರಿಕೆಯನ್ನು ಕರೆದು "ಸಶರೀರನಾಗಿ ನಾನೇ ಬಂದಿದ್ದ ಬಳಿಕ ಪತ್ರದ ಪ್ರಯೋಜನವೇನು? ನನ್ನ ಪತ್ರವನ್ನು ನನಗೆ ಕೊಟ್ಟುಬಿಡು" ಎಂದು ಅಂದನು.

ಚಂದ್ರಿಕೆಯು ಪತ್ರವನ್ನು ಕೊಡಹೋದಳು. ಯಾವದೋ ಒಂದು ವಿಚಾರಕ್ಕೊಳಗಾಗಿ ಕೊಡುವದನ್ನು ತಡೆದು 'ಓದಿ ಕೊಡುವೆನು' ಎಂದಂದಳು.

"ಆ ಪತ್ರವೇನೂ ನನಗೆ ಬೇಕಿಲ್ಲ. ನೀನದನ್ನು ಕೊಟ್ಟರೂ ಅಷ್ಟೇ,

ಕೊಡದಿದ್ದರೂ ಅಷ್ಟೇ. ಪತ್ರವನ್ನು ತಿರುಗಿ ಬೇಡುವದರಲ್ಲಿ ನೀನದನ್ನು ಓದಿಕೊಳ್ಳಬಾರದೆಂಬುದೇ ನನ್ನ ಮುಖ್ಯ ಉದ್ದೇಶವು."

"ಯಾಕೆ?"

"ಓದಿಕೊಂಡರೆ ತಾನೇ ತಾನಾಗಿ ಹೊಳೆಯುವದು!"

ಪತ್ರವನ್ನು ಒಗೆದುಬಿಡಬೇಕೆಂದು ಚಂದ್ರಿಕೆಗೆ ಅನ್ನಿಸಿತು; ಆದರೆ ವೃಂತವು ಫಲವನ್ನು ಹಿಡಿಯುತ್ತಿರುವಂತೆ, ಕುತೂಹಲವು ಪತ್ರವನ್ನು ಅವಳ ಕೈಯಿಂದ ಅಗಲಗೊಡಲಿಲ್ಲ.

ರಮಾಬಾಯಿಯು ಶಾಮನನ್ನು ನೋಡಿ, ವರ್ಣನಾತೀತವಾದ ಆನಂದವನ್ನು ಹೊಂದಿದಳು. ಶಾಮನ ದೇಹಜಾಡ್ಯದ ಬಗ್ಗೆ ವಿಸ್ತೃತವಾದ ಮಾಹಿತಿಯನ್ನು ವಿಚಾರಿಸಿ ತಿಳಿದುಕೊಂಡಳು. ಬಳಿಕ ಅವಳು ಶಾಮನಿಗೆ ಈ ಸುಬುದ್ಧಿಯುಂಟಾದುದಕ್ಕೆ ವಿಸ್ಮಯವನ್ನೂ ಆನಂದವನ್ನೂ ಪ್ರಕಟಿಸಿ, "ಶಾಮು, ನಿನ್ನೆ ಅವರು ನಿನ್ನಲ್ಲಿಗೆ ಬಂದು ನಿನ್ನನ್ನು ಪರಿಪರಿಯಿಂದ ಕರೆದರೂ ಬಾರದವನು, ಇಂದು ಕರೆಯದಲೇ ಬಂದೆ! ಈ ಸದ್ಬುದ್ಧಿಯು ನಿನಗೆ ಹೇಗೆ ಉಂಟಾಯಿತು?" ಎಂದು ಕೇಳಿದಳು.

ಚಂದ್ರಿಕೆಯ ಹಾಗು ಶಾಮನ ನೇತ್ರಸಮ್ಮಿಲನವಾಯಿತು. ಶಾಮನು ನಕ್ಕು ಹೇಳಿದನು:-"ಅಕ್ಕ, ನಿನ್ನೆ ದುರ್ಬುದ್ಧಿಯುಂಟಾದ್ದರಿಂದಲೇ ಈ ಹೊತ್ತು ಸದ್ಬುದ್ಧಿ ಹುಟ್ಟಿತು; ಅಕ್ಕನನ್ನು ಮನೆಗೆ ಕಳುಹಿದ ಬಳಿಕ ನಾನು ನನ್ನ ಅನ್ಯಾಯವನ್ನು ತಿಳಿದುಕೊಂಡೆನು."

ಮತ್ತೆ ನೇತ್ರಸಮ್ಮಿಲನವಾಯಿತು. ಚಂದ್ರಿಕೆಯ ಅಧರೋಷ್ಠದಲ್ಲಿ ಕಿರುನಗೆಯ ಕ್ಷೀಣರೇಖೆಯು ಒಡಮೂಡಿದ್ದನ್ನು ಶಾಮನು ಕಂಡುಕೊಂಡನು. ಅತಿ ತರಲವಾದ ಕೃತಜ್ಞತೆಯ ರಸದಿಂದ ಆ ಸ್ಥಳವು ಸಿಕ್ತವಾಗಿದೆಯೆಂದು ಭಾವಿಸಿಕೊಂಡನು.

---

## ೧೩

**

ಗೋವಿಂದರಾಯನು ಆಫೀಸಿನ ಕೆಲಸವು ತೀರಿದ ಬಳಿಕ ಶಾಮನಿರುವ ಪಥಿಕಾಶ್ರಮದ ಕಡೆಗೆ ಹೊರಟನು. ವ್ಯವಸಾಯ ಬಂಧುಗಳ ಬಳಿಯಲ್ಲಿ ನೂರು ರೂಪಾಯಿಗಳ ಕೈಗಡವನ್ನು ಕೇಳಿ ಕೇಳಿ ದಣಿದು ನಿರಾಶನಾದ ಅವನು, ನಿನ್ನಿನ ಸ್ವಾಭಿಮಾನದ ಮಾತನ್ನು ಮರೆತುಬಿಟ್ಟಿದ್ದನು. ಅಂತದ

ಹಣವನ್ನು ಮುಟ್ಟಿಸದಿದ್ದರೆ, ಸಾವುಕಾರನಿಂದಾಗಬಹುದಾಗಿದ್ದ ಪೀಡೆಯನ್ನು ಮನದಂದು, ಅವನು 'ಇಂದು ಯಾವದೇ ರೀತಿಯಿಂದಾಗಲಿ ಶಾಮುನನ್ನು ಮನೆಗೆ ಕರೆದೊಯ್ಯಬೇಕು ಅನಿರ್ವಾಹ ಪ್ರಸಂಗದಲ್ಲಿ ಹಣವನ್ನಾದರೂ ತಕ್ಕೊಂಡು ಮನೆಗೆ ಹೋಗಬೇಕು' ಎಂದು ನಿರ್ಧರಿಸಿಕೊಂಡಿದ್ದನು.

ಹಾದಿಯ ಹಿಡಿದು ಹೋಗುತ್ತಿರುವ ಗೋವಿಂದರಾಯನ ಮನಸ್ಸಿನಲ್ಲಿ ಯಾಚನೆಯ ಸಂಬಂಧವಾದ ಆ ಶ್ಲೋಕವು ಮತ್ತೆ ಮತ್ತೆ ಬರಹತ್ತಿತು:—

ವೇಪಥುರ್ಮಲಿನಂ ವಕ್ತ್ರಂ ದೀನವಾಕ್ ಗದ್ಗದ ಸ್ವರಃ।
ಮರಣೇ ಯಾನಿ ಚಿಹ್ನಾನಿ ತಾನಿ ಚಿಹ್ನಾನಿ ಯಾಚನೇ ॥

ಆದರೆ ಸ್ವಭಾವದ ಮೇಲೆ ಅಭಾವದ ಪೀಡೆಯು ಅತ್ಯಂತ ಪ್ರಬಲವಾಗಿದ್ದುದರಿಂದ ಗೋವಿಂದರಾಯನು ಶ್ಲೋಕವನ್ನು ಪಠಿಸುತ್ತ ಶಾಮುನ ವಾಸಸ್ಥಳದ ಕಡೆಗೆ ಮುಂದುವರಿಯುವದರಲ್ಲಿದ್ದನು.

ಗೋವಿಂದರಾಯನು ಖಾನಾವಳಿಗೆ ಹೋಗಿ, ಶಾಮುನಿದ್ದ ಕೋಣೆಯ ಕಡೆಗೆ ನಡೆದನು. ಮಧ್ಯದಲ್ಲಿ ಆಶ್ರಮದ ಮಾಲಕನ ಭೆಟ್ಟಿಯಾಯಿತು. ಗೋವಿಂದರಾಯನು ಶಾಮುನ ಸಮಾಚಾರವ ವಿಚಾರಿಸಿದನು. ನಿನ್ನಿನ ಇವನ ಬರುವಿಕೆಗೂ ಇಂದು ಶಾಮುನು ಖಾನಾವಳಿಯನ್ನು ಬಿಟ್ಟು ಹೋಗುವದಕ್ಕೂ ಸಂಬಂಧವಿರಬೇಕೆಂದು ಭಾವಿಸಿದ ಆ ಕಾಳಾ ಬ್ರಾಹ್ಮಣನು ಗೋವಿಂದರಾಯನ ವಿಷಯದಲ್ಲಿ ಪ್ರಸನ್ನನಾಗಿರಲಿಲ್ಲ. ಅವನು ರುಕ್ಷಸ್ವರದಿಂದ:- 'ಶಾಮುರಾಯರು ನಮ್ಮ ಆಶ್ರಮವನ್ನು ಬಿಟ್ಟು ಹೋದರು.'' ಎಂದು ಹೇಳಿದನು.

ವಿಸ್ಮಿತನಾದ ಗೋವಿಂದರಾಯನು ''ಬಿಟ್ಟು ಹೋದನೆ? ಕಡೆಯವರೆಗೂ ಇಲ್ಲವೆ ಕೆಲವು ದಿವಸಗಳ ಮಟ್ಟಿಗೆ ಮಾತ್ರವೇ?'' ಎಂದು ಕೇಳಿದನು.

''ಸ್ವಾಮಿ, ಅದನ್ನು ನಾನರಿಯೆ; ಬಿಟ್ಟು ಹೋದದ್ದೊಂದೇ ನನಗೆ ಗೊತ್ತು!''

''ಎಲ್ಲಿಗೆ ಹೋದನೆಂಬದಾದರೂ ಗೊತ್ತಿದೆಯೆ?''

''ಎಲ್ಲಿಗೆ ಹೋದನೆಂಬುದು ತಮಗೇ ಗೊತ್ತಿರಬೇಕು! ನನ್ನನ್ನೇಕೆ ಕೇಳುತ್ತೀರಿ?''

ಈ ತರದ ಉತ್ತರಗಳಿಂದ ಗೋವಿಂದರಾಯನಿಗೆ ಸಿಟ್ಟು ಬಂದಿತು ಅವನು ''ಸ್ವಾಮಿ, ಹುಡುಗಾಟಿಕೆಗಾಗಿ ನಾನಿಲ್ಲಿ ಬಂದವನಲ್ಲ! ಆದರೆ ನೀವು ಮಾತ್ರ ಹಾಗೆ ತಿಳಿದುಕೊಂಡು ಉತ್ತರಕೊಟ್ಟರೆಂದು ಕಾಣುತ್ತಿದೆ!'' ಎಂದು ಅಂದನು.

ವಿಠ್ಠಪ್ಪನು ದಂತಪಂಗ್ತಿಗಳನ್ನು ಪ್ರದರ್ಶಿಸಿ ''ರಾಯರೆ, ಕೋಪಗೊಳ್ಳಬೇಡಿರಿ. ನಾನು ಮುಂಜಾವಿನಿಂದ ಇದುವರೆಗೆ ದುಡಿದು ದುಡಿದು, ಹಲವು

ತರದ ಜನರೊಡನೆ ತಲೆಯೊಡಕೊಂಡು ಬೇಸತ್ತು ಹೋಗಿದ್ದೇನೆ. ಏನು ಮಾಡುವದಿದೆ? ಕೆಲಸವೇ ಅಂಥದು! ಶಾಮರಾಯರು ಹೋಗುವ ಕಾಲಕ್ಕೆ ಇಂಥಲ್ಲಿಗೇ ಹೋಗುವೆನೆಂದು ನನಗೆ ಹೇಳಿ ಹೋದವರಲ್ಲ. ಬಹುತರ ತಮ್ಮ ಊರಿಗೆ ಹೋಗಿರಬಹುದು'' ಎಂದು ಅಂದನು.

''ಇಂದು ಮುಂಜಾವಿನಲ್ಲಿ ಅವನಿಗೆ ಜ್ವರಬಂದಿದ್ದವೆ?''

''ರಾಯರೆ ನಾನು ಏನು ಹೇಳಲಿ? ಥರ್ಮಾಮಿಟರ ಹಚ್ಚಿ ಪರೀಕ್ಷಿಸಿದವನು ನಾನಲ್ಲ!'' ವಿಠ್ಠಪ್ಪನ ಹಲ್ಲುಗಳು ಪುನಃ ಕಾಣಿಸಿಕೊಂಡವು.

ಗೋವಿಂದರಾಯನು ವಿಠ್ಠಪ್ಪನನ್ನು ಉರಿಗಣ್ಣಿನಿಂದ ನೋಡಿ, ಮನಸ್ಸಿನಲ್ಲಿ ಅವನನ್ನು ಶಪಿಸುತ್ತ, ಆಶ್ರಮದಿಂದ ಹೊರಬಿದ್ದನು. ಹಾದಿಯು ಹಿಡಿದು ಬರುವಾಗ ಶಾಮನು ತನ್ನ ಮನೆಗೆ ಹೋಗಿದ್ದರೂ ಹೋಗಿರಬಹುದೆಂಬ ವಿಚಾರವು ಒಮ್ಮೆ ಅವನ ಮನಸ್ಸಿನಲ್ಲಿ ಬಂದಿತು; ಆದರೆ ನಿನ್ನಿನ ಶಾಮನ ಮಾತುಗಳಿಂದ ಈ ವಿಚಾರವನ್ನು ಒಲಪಡಿಸಿಕೊಳ್ಳುವ ಸಾಹಸವು ಗೋವಿಂದರಾಯನಿಗೆ ಆಗುವಂತಿರಲಿಲ್ಲ.

ಮನೆಗೆ ಹೋಗಿ ಶಾಮನನ್ನು ನೋಡಿದ ಕೂಡಲೆ ಗೋವಿಂದರಾಯನ ಚಿಂತೆಯೆಲ್ಲ ಅಳಿದು ಹೋಯಿತು. ಅವನು ತಾನು ಆಶ್ರಮಕ್ಕೆ ಹೋಗಿ ಬಂದ ಸಂಗತಿಯನ್ನು ಮುಚ್ಚಿಟ್ಟನು; ಆದರೆ ಶಾಮನನ್ನು ನೋಡುವದರಿಂದಾದ ಆನಂದವನ್ನು ಮುಚ್ಚಿಟ್ಟುಕೊಳ್ಳಲಿಕ್ಕೆ ಸಮರ್ಥನಾಗಲಿಲ್ಲ.

ದೂರದಲ್ಲಿ ನಿಂತು ತಂದೆಯ ಪ್ರಸನ್ನ ಮುಖವನ್ನು ನೋಡಿ ಚಂದ್ರಿಕೆಗೆ ಸಂತೋಷವಾಗಲಿಲ್ಲ. ಅವಳು ತಂದೆಯ ಆಂತರಿಕ ಸ್ಥಿತಿಯನ್ನು ಮನದಂದು ಉದ್ವಿಗ್ನಳಾದಳು. ಈ ಆಗ್ರಹಾತಿಶಯದಲ್ಲೂ ಅತಿಥಿಪರಾಯಣತೆಯಲ್ಲೂ ಒಂದು ಬಣದವರ ಉಪಾಯಹೀನತೆಯೂ ಮತ್ತೊಂದು ಪಕ್ಷದ ಯಥೇಚ್ಛಾಚಾರದ ಶಕ್ತಿಯೂ ಆಡಕವಾಗಿರುವದನ್ನು ಊಹಿಸಿದ ಅವಳು ಅತಿಶಯ ಕಳವಳಗೊಂಡಳು. ಶಾಮನು ಅಪರಿಮೇಯ ಅಧಿಕಾರದೊಡನೆ ಮನೆಯಲ್ಲಿ ಕಾಲಿಟ್ಟಿದ್ದರೂ, ಆ ಅಧಿಕಾರವನ್ನು ನಡೆಸುವ ಲಕ್ಷಣವನ್ನು ತೋರದಿರುವದನ್ನು ನೋಡಿಯೂ ಅವಳಿಗೆ ಸಮಾಧಾನವೆನಿಸಲಿಲ್ಲ. ಯಾಕೆಂದರೆ, ಒರೆಯಲ್ಲಿ ಮರೆಯಾಗಿದ್ದ ಶಸ್ತ್ರವು ಬೇಕಾದಾಗ ಹೊರಬಿದ್ದು ತನ್ನ ಸಂಹಾರ ಕಾರ್ಯವನ್ನು ಸಾಂಗಗೊಳಿಸಿಕೊಳ್ಳಬಲ್ಲದೆಂಬುವನ್ನು ಅವಳು ಅರಿತವಳಾಗಿದ್ದಳು. ಶಾಮನ ಈ ಶಸ್ತ್ರವಾದರೋ ಒಂದು ಕಡೆಯಲ್ಲಿ ಹದನವಾದ ಚೂರಿಯನ್ನೊಳಗೊಂಡದ್ದು; ಮತ್ತೊಂದು ಕಡೆ ತೀಕ್ಷ್ಣವಾದ ಜಂಬಿಯದಂತಿರುವುದು. ಈ ಶಸ್ತ್ರವನ್ನು ಪ್ರಯೋಗಿಸುವ ಶಾಮನು ಅತ್ಯಂತ ಕುಶಲನು.

ಯಾವ ಕಾಲಕ್ಕೆ ಯಾವ ಭಾಗವನ್ನು ಉಪಯೋಗಕ್ಕೆ ಹಚ್ಚುವನೆಂಬದು ಯಾರಿಗೂ ಗೊತ್ತಾಗದು!

ಮುಂದೆ ಶಾಮನು ಯಾವ ಕೋಣೆಯಲ್ಲಿ ವಾಸಿಸಬೇಕೆಂಬ ಬಗ್ಗೆ ಚರ್ಚೆ ಹೊರಟಿತು. ಅಂತಸ್ತಿನ ಮೇಲಿನದೊಂದು ಕೋಣೆಯಲ್ಲಿ ಶಾಮನು ಇರಬೇಕೆಂದು ಇಚ್ಛಿಸಿದ ರಮಾಬಾಯಿಯು ಆ ಕೋಣೆಯನ್ನು ಪರಿಷ್ಕಾರ ಗೊಳಿಸುವ ಸಿದ್ಧತೆಯಲ್ಲಿದ್ದಳು; ಆದರೆ ಶಾಮನು ಅದಕ್ಕೆ ಸಮ್ಮತಿಸಲಿಲ್ಲ. ಅವನು ಅಂದದ್ದು:—"ನಾನು ಕೆಳಮನೆಯಲ್ಲಿಯ ಕೋಣೆಯಲ್ಲಿಯೇ ಇರುವೆನು. ರಾಜಮಾರ್ಗಕ್ಕೆ ಹೊಂದಿರುವದರಿಂದ ನನಗೆ ಹೆಚ್ಚು ಆರಾಮವೆನಿಸುವದು" ಆದರೆ ಇದು ಗೋವಿಂದರಾಯನಿಗೂ ರಮಾಬಾಯಿಗೂ ಸೇರಲಿಲ್ಲ. ಇವರು ಶಾಮನ ಮಾತು ಉಪೇಕ್ಷಣೀಯವೆಂದು ನಕ್ಕುಬಿಟ್ಟರು! ತಾವೆಲ್ಲರೂ ಮೇಲೆ ಮಲಗಿ, ಶಾಮನೊಬ್ಬನನ್ನೇ ಕೆಳಮನೆಯಲ್ಲಿ ಮಲಗಿಸುವದು ಸರಿಯಾಗಲಿಕ್ಕಿಲ್ಲೆಂದು ಚಂದ್ರಿಕೆಗೂ ಅನಿಸಿತು.

"ಶಾಮು, ಮೇಲೆ ಮೂರು ಕೋಣೆಗಳಿವೆ. ಯಾರಿಗೂ ತೊಂದರೆ ಯಾಗುವಂತಿಲ್ಲ. ಹೀಗಿರಲು ಕೆಳಮನೆಯಲ್ಲಿಯೇ ಇರುವೆನೆಂದು ನೀನೇಕೆ ಹಟಹಿಡಿಯುತ್ತಿರುವೆ?" ಗೋವಿಂದರಾಯನು ಕೇಳಿದನು.

"ಕಕ್ಕಾ, ಅಂತಸ್ತಿನಲ್ಲಿ ಕೋಣೆಗಳ ಅಭಾವವಿಲ್ಲವೆಂದೇ ನಾನು ಕೆಳಮನೆಯಲ್ಲಿರಲು ಬಯಸುತ್ತೇನೆ. ಕೋಣೆಗಳ ಅಡಚಣಿಯು ಮೂಲಕ ನೀವು ನನ್ನನ್ನು ಕೆಳಗಿರಿಸಿದ್ದರೆ, ನಾನಾಗಲಿ ಬೇರೆ ಜನರಾಗಲಿ ನಿಮಗೆ ಅಪವಾದ ಕೊಡಬಹುದಾಗಿತ್ತು. ಹೀಗಿಲ್ಲವೆಂದ ಬಳಿಕ ನಾನು ಮೇಲೆಯೇ ಇರಬೇಕೆಂದು ನೀವಾದರೂ ಆಗ್ರಹ ತೊಡುತ್ತಿರುವದೇಕೆ?"

ಗೋವಿಂದರಾಯನೂ ರಮಾಬಾಯಿಯೂ ಬಹಳವಾಗಿ ವಾದ-ವಿವಾದವ ಮಾಡಿದರು; ಆದರೂ ಶಾಮನು ಕೇಳಲಿಲ್ಲ. ಅವನಲ್ಲಿ ಸಂಕಲ್ಪವನ್ನು ಕಾರ್ಯರೂಪವಾಗಿ ಪರಿಣಮಿಸುವ ಶಕ್ತಿಯು ಸಾಕಷ್ಟು ಇದ್ದಿತು. ಕಡೆಗೆ ಗೋವಿಂದರಾಯನು ಶಾಮನ ಇಚ್ಛೆಯಂತೆಯೇ ನಡಕೊಳ್ಳಬೇಕಾಯಿತು.

ಮರುದಿನ ಮುಂಜಾನೆ ಚಂದ್ರಿಕೆಯು:—"ಶಾಮಣ್ಣ, ನಿನ್ನೆ ರಾತ್ರಿಯಲ್ಲಿ ಉಷ್ಣತೆಯ ತಾಪದಿಂದ ನಿನಗೆ ಬಹಳ ತ್ರಾಸಾಗಿರಬಹುದಲ್ಲವೇ? ನೀನು ಮೇಲಿನ ಕೋಣೆಯಲ್ಲಿ ಮಲಗಿದ್ದರೆ, ತೊಂದರೆಯಾಗುತ್ತಿದ್ದಿಲ್ಲ." ಎಂದು ವಿನೋದಕ್ಕಾಗಿ ನುಡಿದಳು.

ಶಾಮನು ನಕ್ಕು:-"ಚಂದ್ರಿಕೆ, ಖಾನಾವಳಿಯಿಂದ ನನ್ನನ್ನು ಇಲ್ಲಿಗೆ ಬರ ಮಾಡಿಕೊಂಡಿರುವೆ. ಇನ್ನೂ ಹತ್ತಿರ ಕರೆದೊಯ್ಯುವ ಸಾಹಸಮಾಡುವೆಯಾ?

ಚಂದ್ರಿಕೆಯ ಮುಖವು ಆರಕ್ತವಾಯಿತು. ಆದರೂ ಅವಳು ಮಾತನ್ನು ವಿನೋದದಲ್ಲಿಯೇ ಪರ್ಯವಸಾನಗೊಳಿಸುವದಕ್ಕಾಗಿ ಅಂದದ್ದು:-"ಅಣ್ಣಾ, ಹೆದರಿಕೆಯೇತರದು? ನೀನೇನೂ ಭೂತವಲ್ಲ!"

ಶಾಮನು ತುಸಹೊತ್ತು ಸುಮ್ಮನೇ ಕುಳಿತು ಬಳಿಕ ಮೆಲ್ಲನೆ ನಕ್ಕು:- "ಚಂದ್ರಿಕೆ, ಭೂತವಾದರೆ ಹೆದರುವ ಕಾರಣವಿರಲಿಲ್ಲ. ನಾನು ನಿನ್ನ ಭವಿಷ್ಯತ್! ಅಂತೆಯೇ ನೀನು ನನಗೆ ಹೆದರಬೇಕಾಗಿದೆ!"

ಚಂದ್ರಿಕೆಯು ನಗುತ್ತಲೆ ಹೇಳಿದಳು:-—"ಹೀಗಿದ್ದರೂ ನಾನು ಭಯ ಪಡುವ ಕಾರಣವಿಲ್ಲವಣ್ಣಾ. ಭವಿಷ್ಯತ್ಕಾಲದಲ್ಲಿ ನನ್ನ ಕಲ್ಯಾಣ ಮಾಡುವೆನೆಂದು ನೀನು ಅಪ್ಪನ ಮುಂದೆ ಕೊಚ್ಚಿಕೊಂಡಿರುವೆ!"

ಶಾಮನು ಸ್ವರವನ್ನು ಪರಿವರ್ತನೆಗೊಳಿಸಿಕೊಂಡು:-—"ಚಂದ್ರಿಕೆ, ನಿನ್ನ ಕಲ್ಯಾಣ ಮಾಡುವೆನೋ ನನ್ನ ಕಲ್ಯಾಣ ಮಾಡಿಕೊಳ್ಳುವೆನೋ ಎಂಬದನ್ನು ಈಗ ಹೇಗೆ ಹೇಳಲಿಕ್ಕಾದೀತು? ಭವಿಷ್ಯತ್ತು ಕೀರ ಅನಿಶ್ಚಿತವಾದುದು! ಅದರ ಮೇಲೆ ವಿಶ್ವಾಸವಿಡಲಿಕ್ಕೆ ಬಾರದು!"

ಚಂದ್ರಿಕೆಯು ಶಾಂತಸ್ವರದಿಂದ ಹೇಳಿದಳು:—"ನಂಬಲಿಕ್ಕೆ ಬಾರದಿದ್ದರೆ ಬಿಡಲಿ! ಅಣ್ಣಾ, ಯಾವುದನ್ನು ನಂಬಲಿಕ್ಕೆ ಬರುವಂತಿದೆ? ನೀನೇ ಹೇಳು. ಕಾಲವನ್ನು ನಂಬುವಂತಿಲ. ಮನುಷ್ಯರನ್ನು ನಂಬುವ ಹಾಗಿಲ್ಲ! ನಾನು ನಿನ್ನ ಮಾತಿನಲ್ಲಿ ನಂಬುಯನ್ನಿಟ್ಟಿರುವೆನೆಂದು ನಿನಗೆ ಹೇಳಿದವರಾರು?"

"ಹಾಗಾದರೆ, ನೀನು ಕಡೆಯುವರೆಗೂ ಹೀಗೆಯೇ ಇರಬಲ್ಲೆಯಾ?"

"ಇರದೆ ಏನು? ಹೀಗೆಯೇ ಕಾಲಕಳೆಯುವೆನು!"

"ಇಷ್ಟೊಂದು ಶಕ್ತಿಯು ನಿನಗಿದೆಯೇ?"

"ಉಂಟು."

ಶಾಮನಿಂದ ಮುಂದೆ ಮಾತನಾಡಲಿಕ್ಕೆ ಆಗಲಿಲ್ಲ. ಅವನು ಮನಸ್ಸಿನಲ್ಲಿಯೇ 'ನಿಜವಾಗಿಯೂ ಹೀಗೆಯೇ ಆದರೆ ನೇರಿಗೆ ಸವ್ವಾಸೇರು ಗಂಟು ಬಿದ್ದಂತಾಗುವದು!' ಎಂದು ಅಂದುಕೊಂಡನು.

೦ ೦ ೦ ೦

ಶಾಮನು ತನ್ನ ಮನೋಬಯಕೆಯನ್ನು ಸ್ಪಷ್ಟವಾಗಿ ಆಡಿ ತೋರಿಸಿದವನಲ್ಲ. ಚಂದ್ರಿಕೆಯಾದರೂ ಆ ಹೊಲಸು ಭಾವನೆಯನ್ನು ಕಲ್ಪಿಸಿ ಉತ್ತರ ಕೊಟ್ಟವಳಲ್ಲ. ಆದರೂ ಶಾಮನು ತಾನು ಇಚ್ಛಿಸಿದಂತೆ ಚಂದ್ರಿಕೆಯು ಸುಲಭಸಾಧ್ಯಳಲ್ಲವೆಂಬದನ್ನು ಗ್ರಹಿಸಿದನು. ಚಂದ್ರಿಕೆಯನ್ನು ಪರಾಜಯಗೊಳಿಸುವದು ದುಸ್ತರವೆಂದು ಭಾವಿಸಿದನು. ವಿದ್ಯುತ್ಪ್ರವಾಹಕ್ಕೆ ತಡೆಯುಂ

ಬಾಗುತ್ತಲೆ ಸೂಕ್ಷ್ಮವಾದ ತಂತಿಯು ದೀಪ್ತವಾಗಿ ಜ್ವಲಿಸತೊಡಗುವಂತೆ ಶಾಮುನು ತನ್ನ ವಾಂಛಿತಕ್ಕಿರುವ ಅಡ್ಡಿಯನ್ನು ಕಲ್ಪಿಸಿ ಸಂತಾಪಗೊಂಡನು. ವಸ್ತುವು ದುರ್ಲಭವೆಂದೆನಿಸುತ್ತಲೆ ಲೋಭವು ಹತ್ತುಪಟ್ಟಿನಿಂದ ಹೆಚ್ಚಿತು.

ಲೋಭವನ್ನು ಸಾಧ್ಯವಿರುವ ಮಟ್ಟಿಗೆ ಮುಚ್ಚಿಟ್ಟುಕೊಳ್ಳುವದು ಲಾಭ ಮಾಡಿಕೊಳ್ಳುವದರ ಕುಶಲತೆಯಾಗಿದೆ. ಪೇಟೆಯಲ್ಲಿಯ ನಿತ್ಯದ ವ್ಯವಹಾರದ ಜೀನಸುಗಳನ್ನು ಕೊಳ್ಳುವಾಗ ಉಪಯೋಗಕ್ಕೆ ಬೀಳುವ ಈ ತತ್ವವು ಮಾನಸಿಕ ಬಜಾರದಲ್ಲೂ ಕೆಲವು ಪ್ರಸಂಗಗಳಲ್ಲಿ ಉಪಯುಕ್ತವಾಗುವದು. ಶಾಮನು ಈ ನಿಯಮಕ್ಕನುಸರಿಸಿ ತನ್ನ ಉದ್ದೇಶವನ್ನು ಮರೆಯಲ್ಲಿಟ್ಟುಕೊಂಡು ವರ್ತಿಸಹತ್ತಿದನು. ದಿನದ ಬಹು ಭಾಗವನ್ನು ಮನೆಯ ಹೊರಗಿದ್ದು ಕಳೆಯತೊಡಗಿದನು. ಮನೆಯಲ್ಲಿದ್ದಾಗ ನಾಲ್ಕೆಂಟು ಕೆಲಸಗಳನ್ನು ಹುಡುಕಿಕೊಂಡು ತನ್ನ ಕೋಣೆಯಲ್ಲಿ ಕುಳಿತು ಆ ಕೆಲಸಗಳಲ್ಲಿ ತತ್ಪರನಾಗಿರುವಂತೆ ನಟಿಸಹತ್ತಿದನು. ಚಂದ್ರಿಕೆಯು ಕಾರ್ಯಾಂತರದಿಂದ ದಿನಾಲು ಒಂದೆರಡು ಸಾರೆ ಶಾಮನ ಬಳಿಗೆ ಬರುತ್ತಿದ್ದಳು; ಆದರೆ ಶಾಮನು ಆ ಪ್ರಸಂಗದಲ್ಲಿ ಅಧಿಕಪ್ರಸಂಗತನವನ್ನೇನೂ ಮಾಡುತ್ತಿರಲಿಲ್ಲ. ಅವಶ್ಯವಿರುವಷ್ಟೇ ಮಾತಾಡಿ ಸುಮ್ಮನಾಗುತ್ತಿದ್ದನು.

ಹೀಗೆ ಕೆಲವು ದಿವಸಗಳು ಕ್ರಮಿಸಿದವು. ಮುಂದೆ ಒಂದು ದಿವಸ ಶಾಮನಿಗೆ ಮತ್ತೆ ಕಾಹಿಲೆಯಾಯಿತು. ಗೋವಿಂದರಾಯನು:—"ಶಾಮು, ಏನಾಗಿದೆಯಪ್ಪಾ?" ಎಂದು ಉದ್ವಿಗ್ನತೆಯಿಂದ ಕೇಳಿದನು. ಶಾಮನು ತಲೆಗೆ ಮಫ್ಲರ ಕಟ್ಟಿಕೊಂಡು, ಕಾಲಲ್ಲಿ ಕಾಲುಚೀಲ ಹಾಕಿಕೊಂಡು, ಶಾಲುಹೊದ್ದುಕೊಂಡು ಹಾಸುಗೆಯ ಮೇಲೆ ಕುಳಿತಿದ್ದನು. ತಕ್ಕನ ಪ್ರಶ್ನೆಗೆ ಉತ್ತರವಾಗಿ ಆವನು ಹೇಳಿದ್ದು:—"ಹೆದರುವ ಕಾರಣವೇನೂ ಇಲ್ಲ. ನಿನ್ನೆ ರಾತ್ರಿ ಜ್ವರ ಬಂದಿದ್ದವು. ಕೈಕಾಲು ಹರಿಯುತ್ತಿವೆ. ಒಂದೆರಡು ದಿನಗಳಲ್ಲಿ ಗುಣವಾಗಬಹುದು."

ರಮಾಬಾಯಿಯು ಚಿಂತಿತಸ್ವರದಿಂದ:-"ಇಷ್ಟು ಜಡ್ಡಾಗಿದ್ದರೂ, ಹೆದರುವ ಕಾರಣವಿಲ್ಲೆಂದು ಅನ್ನುತ್ತಿರುವೆಯಲ್ಲಪ್ಪಾ! ಬಹಳ ಭಿಡೆಯದ ಪ್ರಕೃತಿಯವನು ನೀನು!" ಬಳಿಕ ಅವಳು ಪತಿಯನ್ನು ಕುರಿತು:—"ಜ್ವರ ಹೇಗಿವೆಯೆಂಬುದನ್ನು ನೈ ಹಿಡಿದು ನೋಡಿರಿ" ಎಂದು ಹೇಳಿದಳು.

ಗೋವಿಂದರಾಯನು ಜ್ವರವನ್ನು ಪರೀಕ್ಷಿಸಿ "ಶಾಮು, ನೀನು ನಮ್ಮ ಮಾತು ಕೇಳದೆ ಹಟದಿಂದ ಕೆಳಮನೆಯಲ್ಲಿ ಮಲಗಿ ಈ ಜಡ್ಡು ತಂದುಕೊಂಡೆ!" ಎಂದು ಅಂದನು.

ಶಾಮನು ಮೆಲ್ಲನೆ ನಕ್ಕು ಹೇಳಿದನು:—“ಕಕ್ಕಾ, ಹೀಗೇನೂ ಅಲ್ಲ. ಮೇಲೆ ಮೇಲೆ ಹೀಗೆ ವ್ಯಾಧಿಯುಂಟಾಗುತ್ತಿರುವದು ನನ್ನ ಪ್ರಕೃತಿಯ ಧರ್ಮವಾಗಿ ಹೋಗಿದೆ. ಜಡ್ಡು ಆಗಾಗ್ಗೆ ಆಗುವದು, ಒಂದೆರಡು ದಿವಸವಿದ್ದು ಹೋಗುವದು!” ಬಳಿಕ ಅವನು ಅತ್ತಿತ್ತ ನೋಡಿ, “ಕಕ್ಕಾ, ನೀನು ಮನೆಯ ಮೇಲೆ ದೋಷ ತೋರಿಸುತ್ತಿರುವೆಯಲ್ಲ! ಎಲ್ಲಿಯೂ ಹೊಲಸಿಲ್ಲ. ತಂಪಿಲ್ಲ!” ಎಂದು ಅಂದನು.

“ಮನೆಯು ಹೇಗೇ ಇರಲಿ, ಇನ್ನು ನೀನು ಇಲ್ಲಿರಬೇಡ. ಮೇಲೆ ನಡೆ” ಎಂದಂದು, ಗೋವಿಂದರಾಯನು ದೂರದಲ್ಲಿ ನಿಂತಿದ್ದ ಚಂದ್ರಿಕೆಯನ್ನು ಕುರಿತು:—“ಅಂತಸ್ತಿನ ಮೇಲಿನ ಕಡೆಯ ಕೋಣೆಯನ್ನು ಇವನಿಗೋಸುಗ ಸ್ವಚ್ಛವಮಾಡಿಡು” ಎಂದು ಆಜ್ಞಾಪಿಸಿದನು.

‘ಕಕ್ಕಾ, ಬೇಡ. ಈಗ ಜಳ ಜಳ ಮಾಡಿಸುವ ಕಾರಣವಿಲ್ಲ. ನನ್ನ ಕಾಲುಗಳಲ್ಲಿ ತ್ರಾಣವಿಲ್ಲ. ಈಗ ನಾನು ಪಾವಟಿಗೆಗಳನ್ನು ಹತ್ತಿ ಮೇಲೆ ಹೋಗಲಾರದವನಾಗಿದ್ದೇನೆ. ಈ ಬೇನೆಯು ಗುಣವಾದ ಬಳಿಕ ಮುಂದೆ ನೋಡೋಣವಂತೆ.”

ಮರುದಿನ ಶಾಮನ ಪ್ರಕೃತಿಯ ಪರೀಕ್ಷೆಗೆ ಡಾಕ್ಟರನು ಬಂದನು. ಅವನು ಶಾಮನನ್ನು ಕೆಳಮನೆಯಲ್ಲಿ ಮಲಗಗೊಡುವದು ವಿಹಿತವಲ್ಲವೆಂದು ಸ್ಪಷ್ಟವಾಗಿ ಹೇಳಿದನು. ಇದರಿಂದ ಗೋವಿಂದರಾಯನು ಶಾಮನ ಅಡ್ಡಿಯನ್ನು ಲಕ್ಷಿಸದೆ, ಅವನನ್ನು ಮೇಲೆ ಕರೆದೊಯ್ದನು.

ಒಂದು ದಿವಸ ಚಂದ್ರಿಕೆಯು ವಿನೋದಮಾಡುವದಕ್ಕೆ ‘ಅಣ್ಣಾ, ಕಾಲುಗಳ ಶಕ್ತಿಯನ್ನು ಕುಂದಿಸಿಕೊಳ್ಳದೆ, ಮೊದಲೇ ಮೇಲೆ ಬಂದಿದ್ದರೆ ನೆಟ್ಟಗಾಗುತ್ತಿದ್ದಿಲ್ಲವೇನು?” ಎಂದು ಕೇಳಿದಳು.

ಶಾಮನು ನಕ್ಕು ನುಡಿದನು: “ಚಂದ್ರಿಕೆ, ಶಕ್ತಿಸಂಪನ್ನ ಕಾಲುಗಳಿಂದ ಹೋಗಲಿಕ್ಕೆ ಬಾರದ ಸ್ಥಳದಲ್ಲಿ ಕಾಲುಗಳ ಬಲವು ಅಳಿದಾಗ ಪ್ರವೇಶಿಸಲಿಕ್ಕಾಗುತ್ತಿರುವದು ಕೆಲಕೆಲವು ಪ್ರಸಂಗಗಳಲ್ಲಿ ಕಂಡುಬರುತ್ತಿರುವದು. ಕಾಲಿರುವಾಗ ಹೆರವರ ಹೆಗಲ ಮೇಲೆ ಹೋಗಿ ಕುಳಿತುಕೊಳ್ಳಲಿಕ್ಕಾದೀತೆ?”

“ಶಾಮಣ್ಣಾ, ಮೇಲ್ಮನೆಯನ್ನು ಪ್ರವೇಶಿಸುವದು ನಿನಗೆ ಎಂದೂ ಅಶಕ್ಯವಿರಲಿಲ್ಲವಲ್ಲ!”

“ಅಶಕ್ಯವಿರದಿದ್ದರೂ ತಡೆಯಿದ್ದೇ ಇತ್ತು. ಆ ಎಡರು ಡಾಕ್ಟರನ ಸರ್ಟಿಫಿಕೇಟಿನಿಂದ ದೂರವಾದಂತಾಯಿತು.” ಶಾಮನು ನಗತೊಡಗಿದನು.

ಶಾಮನು ಸಹಜವಿದ್ದ ಮಾತುಗಳನ್ನು ಬುದ್ಧಿಪೂರ್ವಕವಾಗಿ ಗೂಢತೆಗೆ ಒಯ್ಯುತ್ತಿರುವದನ್ನು ತಿಳಿದ ಚಂದ್ರಿಕೆಯು ಬೇರೆ ಮಾತನ್ನು ಎತ್ತಿದಳು; ಆದರೂ ಶಾಮನು ತನ್ನ ಕಾಯಕವನ್ನು ಬಿಡಲಿಲ್ಲ. ಕಡೆಗೆ ಚಂದ್ರಿಕೆಯು ಬೇಸತ್ತು ಆ ಸ್ಥಳವನ್ನು ಬಿಟ್ಟು ನಡೆದಳು.

ಚಂದ್ರಿಕೆಯು ಶಾಮನಿಗೆ ಪತ್ರವನ್ನು ಬರೆದಾಗಲೇ ಇನ್ನು ತಾನು ಹುಲಿಯೊಡನೆ ಆಟವಾಡಬೇಕಾಗಿ ಬರುವದೆಂಬದನ್ನು ಗೊತ್ತುಮಾಡಿಕೊಂಡವಳಾಗಿದ್ದಳು; ಹಾಗು ಆ ಭಯಂಕರ ಆಟಕ್ಕೆ ಸಿದ್ಧಳಾಗಿದ್ದಳು; ಆದರೆ ಆ ಆಟದಲ್ಲಿ ಮೇಲಿಂದ ಮೇಲೆ ಅಪಘಾತದ ಆಶಂಕೆಯುಂಟಾಗುತ್ತಿರುವದನ್ನು ತಿಳಿದು, ಅವಳು ನಿರ್ದಿಷ್ಟ ಮೇರೆಯನ್ನು ಮೀರಿ ನಡೆದ ಹುಲಿಯನ್ನು ನೋಡಿ ಸರ್ಕಸಿನವನು ಗಾಬರಿಗೊಳ್ಳುವಂತೆ ಭಯಗ್ರಸ್ತಳಾದಳು. ಯಾವತ್ತು ಸಂಗತಿಗಳನ್ನು ತಾಯಿಗೆ ವಿವರಿಸಿ ಹೇಳಬೇಕೆಂದು ಒಮ್ಮೊಮ್ಮೆ ಅವಳು ಆಲೋಚಿಸುತ್ತಿದ್ದಳು; ಆದರೆ ಶಾಮನ ಮೇಲೆ ತಪ್ಪುಹೊರಿಸುವ ಕಾರಣಗಳೆಲ್ಲ ಕಾಲ್ಪನಿಕವಾಗಿರುವದರಿಂದಲೂ ಪ್ರತ್ಯಕ್ಷ ಪ್ರಮಾಣಗಳು ಇಲ್ಲದಿರುವದರಿಂದಲೂ ಮಾತೆಯು ಮುಂದೆ ದೂರಿಕೊಳ್ಳಲು ಹಿಂಜರಿಯುತ್ತಿದ್ದಳು. ಮೇಲಾಗಿ ಅರ್ಥದಿಂದ ಪಿತನನ್ನೂ, ಭವಿಷ್ಯದಾಸೆಯಿಂದ ಮಾತೆಯನ್ನೂ ಸಂಪೂರ್ಣವಾಗಿ ಅಂಕೆಯಲ್ಲಿ ತಕ್ಕೊಂಡಿದ್ದ ಶಾಮನ ಮೇಲೆ ಆರೋಪ ಹೊರಿಸಿದ ಅರ್ಜಿಯು ವಿಚಾರಣೆಯಿಲ್ಲದೆ ನಾಮುಂಜೂರ ಬಗುವದೆಂಬದನ್ನೂ ಅವಳು ತರ್ಕಿಸಿದ್ದಳು.

---

## ೧೪

ಶಾಮನು ಬೇನೆಯು ಗುಣವಾದ ಬಳಿಕ ಒಂದು ನಿಮಿತ್ತವನ್ನು ಮುಂದೆ ಮಾಡಿ ಬೆಂಗಳೂರಿಗೆ ಹೊರಟನು. ಹೋಗುವಾಗ್ಗೆ ಚಂದ್ರಿಕೆಯನ್ನು ಕರೆದು ಅವಳ ಕೈಯಲ್ಲಿ ಕೀಲಿಯ ಕೈಯನ್ನು ಕೊಟ್ಟು:—"ಟ್ರಂಕನ್ನೂ, ಬೀಗದ ಕೈಯನ್ನೂ ನಿನ್ನ ಸ್ವಾಧೀನ ಪಡಿಸಿದ್ದೇನೆ. ಬಂದ ಬಳಿಕ ತಿರುಗಿ ತಕ್ಕೊಳ್ಳುತ್ತೇನೆ" ಎಂದು ಹೇಳಿದನು.

ಚಂದ್ರಿಕೆಯು ಅನುಮಾನಿಸಿ ಹೇಳಿದಳು:—"ಅಣ್ಣಾ, ಇದನ್ನು ತಕ್ಕೊಂಡು ನಾನೇನು ಮಾಡಲಿ? ನೀನೇ ಸಂಗಡ ತೆಗೆದುಕೊಂಡು ಹೋಗು."

ಶಾಮನು ನಕ್ಕು:—"ಟ್ರಂಕು ಇಲ್ಲಿಯೇ ಇದ್ದ ಬಳಿಕ ಕೀಲಿಯ

ಕೈಯನ್ನು ಸಂಗಡ ಒಯ್ಯುವದರಿಂದ ಪ್ರಯೋಜನವೇನು? ನಿರುಪಯುಕ್ತವಾದ ವಸ್ತುವನ್ನು ಪ್ರವಾಸದಲ್ಲಿ ಹತ್ತರಿಟ್ಟುಕೊಳ್ಳುವದರಿಂದ ಕಳೆದುಹೋಗುವ ಭಯವಂತೂ ಇದ್ದೇ ಇದೆ. ಮೇಲಾಗಿ ಮತ್ತೊಂದು ಕಾರಣಕ್ಕಾಗಿಯೂ ಈ ಬೀಗದ ಕೈ ನಿನ್ನ ಹತ್ತರ ಇರುವದು ಆವಶ್ಯವಾಗಿದೆ."

ಉತ್ಸುಕಳಾದ ಚಂದ್ರಿಕೆಯು "ಅದು ಯಾವ ಕಾರಣ?" ಎಂದು ಕೇಳಿದಳು.

ಶಾಮನು ಮನಿಯಾರ್ಡರ ಫಾರ್ಮ ಚಂದ್ರಿಕೆಯ ಕೈಯಲ್ಲಿ ಕೊಟ್ಟು ಹೇಳಿದನು:—"ಫಾರ್ಮ ತುಂಬಿ ಇಟ್ಟಿದ್ದೇನೆ. ನಾನು ಬೆಂಗಳೂರಿಂದ ಪತ್ರ ಬರೆಯುವೆನು. ನೀನು ಈ ಫಾರ್ಮನ್ನೂ ಪೆಟ್ಟಿಗೆಯೊಳಗಿನ ರೂಪಾಯಿಗಳನ್ನೂ ಕಕ್ಕನ ಕೈಯಲ್ಲಿ ಕೊಟ್ಟು ಮನಿಯಾರ್ಡರ ಮಾಡಿಸು. ಒಂದು ವೇಳೆ ನಾನು ಪತ್ರವನ್ನು ಬರೆಯದಿದ್ದರೆ ಮನಿಯಾರ್ಡರ ಮಾಡಿಸಬೇಡ."

ಚಂದ್ರಿಕೆಯು ತುಸ ಆಲೋಚಿಸಿ:—"ಶಾಮಣ್ಣಾ, ಹೀಗಿದ್ದರೆ ಇವುಗಳನ್ನು ಅಪ್ಪನ ಕೈಯಲ್ಲೇ ಕೊಡು" ಎಂದು ಹೇಳಿದಳು.

"ಮನಿಯಾರ್ಡರ ಮಾಡಬೇಕೋ ಮಾಡಬಾರದೋ ಎಂಬ ಸಂದೇಹವಿದ್ದಾಗ ಈಗಿನಿಂದಲೇ ಕಕ್ಕನಿಗೆ ತ್ರಾಸಕೊಡುವದು ಒಳಿತಲ್ಲ. ಮೇಲಾಗಿ ನೀನು ಹೀಗೆ ಸಂಕೋಚಗೊಳ್ಳುತ್ತಿರುವ ಕಾರಣವೇ ನನಗೆ ತೋಚದಾಗಿದೆ."

ಚಂದ್ರಿಕೆಯಿಂದ ಸ್ಪಷ್ಟವಾದ ಉತ್ತರ ಹೇಳಲಿಕ್ಕಾಗಲಿಲ್ಲ. ಅವಳು ಸುಮ್ಮನಾದಳು. ಶಾಮನು ಉಮಾಬಾಯಿಗೆ ನಮಸ್ಕಾರ ಮಾಡಿ, ಇನ್ನು ಏಳೆಂಟು ದಿವಸಗಳಲ್ಲಿ ಬರುವೆನೆಂದು ಹೇಳಿ ಹೊರಟನು; ಆದರೆ ಹದಿನೈದು ದಿನಗಳು ಕ್ರಮಿಸಿದರೂ ಶಾಮನು ಬರಲಿಲ್ಲ.

ಮನೆಯ ಕಂತವನ್ನು ಮುಟ್ಟಿಸುವ ಸಮಯವು ಮೀರಿಹೋಗಿದೆ. ಕುಬೇರನು ದಿನಾಲು ಬಂದು ಗೋವಿಂದರಾಯನಿಗೆ ತ್ರಾಸಕೊಡತೊಡಗಿದ್ದನು. ಗೋವಿಂದರಾಯನು ಶಾಮನು ಊರಲ್ಲಿಲ್ಲದಿರುವ ನೆವವನ್ನು ತೋರಿ ಮೂರು-ನಾಲ್ಕು ದಿನಗಳನ್ನು ಕಳೆದನು. ಈ ಸಮಯದಲ್ಲಿ ಬೆಂಗಳೂರಿಂದ ಪತ್ರ ಬಂದಿತು. ಶಾಮನು ಈಗ ಬರುವದಕ್ಕಾಗುವದಿಲ್ಲವೆಂದೂ ಮದ್ರಾಸಿಗೆ ಹೋಗಿ ಇನ್ನು ಹತ್ತು-ಹದಿನೈದು ದಿವಸಗಳಲ್ಲಿ ಬರುವೆನೆಂದೂ ಅದರಲ್ಲಿ ಬರೆದಿತ್ತು. ಗೋವಿಂದರಾಯನು ಪತ್ರವನ್ನೋದಿಕೊಂಡು ಬಹು ವಿಷಾದಹೊಂದಿದನು. ಸಾಯಂಕಾಲದಲ್ಲಿ ಕುಬೇರನು ಬರಲು, ಪತ್ರದ ಸುದ್ದಿಯು ಕೇಳಿ, ಏನನರ್ಥವನ್ನೊಡ್ಡುವನೋ, ಎಂಬ ಶಂಕೆಯಿಂದ ಅನ್ನ-ನೀರುಗಳ ಮಮತೆಯನ್ನು ತೊರೆದು ಹುಚ್ಚನಂತಾಗಿ ಹೋದನು.

ರಮಾಬಾಯಿಯು ಚಿಂತಾಪೂರ್ಣಸ್ವರದಿಂದ "ಹಲವು ಚಿಂತೆಗಳಿಂದ ಮೊದಲೇ ಕೊರಗಿದ್ದೀರಿ. ಹೀಗೆ ಅನ್ನ-ನೀರುಗಳನ್ನು ಬಿಟ್ಟರೆ ನಿಮ್ಮ ಗತಿ ಯೇನಾಗಬೇಕು? ಬಹುದಿವಸ ಬದುಕುವ ಬಗೆ ಹೇಗೆ?'' ಎಂದು ಕೇಳಿದಳು.

ಹೊರಹೊರಡುತ್ತಿದ್ದ ಗೋವಿಂದರಾಯನು ಸತಿಯ ಮಾತುಗಳನ್ನು ಕೇಳಿ ತಿರುಗಿ ಬಂದು ವಿಷಾದಪೂರ್ಣಸ್ವರದಿಂದ ಅಂದದ್ದು "ಬಹು ದಿವಸ ಬಾಳು ವದು ಹೇಗೆಂದು ಕೇಳುವೆಯಾ? ಬಾಳುವುದು ಯಾರಿಗೆ ಬೇಕಾಗಿದೆ? ಈ ಮೇರೆಗೆ ಚಿಂತೆಯ ಬೆಂಕಿಯಲ್ಲಿ ಬಿದ್ದು, ಹಗಲು-ರಾತ್ರಿ ಚಟಪಡಿಸುತ್ತ ಸಾಯುವದಕ್ಕಿಂತ ಚಿತೆಯ ಜ್ವಾಲೆಯಲ್ಲಿ ಬಿದ್ದುಕೊಂಡು ಒಮ್ಮೆಲೆ ಬೂದಿ ಯಾಗಿ ಹೋಗುವದು ಒಳಿತಲ್ಲವೇನು?''

"ಹೀಗೆಂದರೆ ಹೇಗೆ? ಗಂಡಸರು ನೀವು! ಹೆಂಡತಿ ಮಕ್ಕಳ ಕಡೆಗಾ ದರೂ ಲಕ್ಷ್ಯಗೊಟ್ಟು ಪ್ರಕೃತಿಯನ್ನು ಕಾಯ್ದುಕೊಳ್ಳಿರಿ! ಹುಚ್ಚರಂತೆ ಆಚರಿಸ ಬೇಡಿರಿ!"

ಗೋವಿಂದರಾಯನು ಉನ್ಮತ್ತನಂತೆ ಮಾತನಾಡತೊಡಗಿದನು:"ನಿಮ್ಮ ಕಡೆಗೆ ಲಕ್ಷವಿಟ್ಟು ನಾನು ಬದುಕಬೇಕೆ? ನಿಮ್ಮ ಸಲುವಾಗಿ ಚಿಂತಿಸಿಯೇ ಸದ್ಯಕ್ಕೆ ಹುಚ್ಚನಾಗಲಿಕ್ಕೆ ಸಮೀಪಿಸಿದ್ದೇನೆ! ಇನ್ನಾದರೂ ನನ್ನ ಆ ಚಿಂತೆ ತಪ್ಪಬಾರದೇನು? ಮಹಾರಾಯಳೆ, ಇನ್ನು ನನಗೆ ಇರುವದು ಬೇಡ; ಸಾಯು ವದೇ ಬೇಕು! ಹೆಂಡಿರು-ಮಕ್ಕಳ ಸಂರಕ್ಷಣೆ ಮಾಡಲಸಮರ್ಥನಾದ ನನ್ನಂ ಥವನು ಜೀವಿಸಿರುವದಕ್ಕಿಂತ ಸಾಯುವವರಿಂದಲೇ ಆ ಹೆಂಡಿರು-ಮಕ್ಕಳ ಹಿತವು ಸಾಧಿಸುವಂತಿದೆ! ನನಗಾಗುತ್ತಿರುವ ಯಾತನೆಯನ್ನು ಯಾರ ಮುಂದೆ ಹೇಳಲಿ? ತುಸ ವಿಚಾರಮಾಡಿ ನೋಡು. ಆಫೀಸಿನಲ್ಲಿ ದಿನಾಲು ಐದಾರು ತಾಸುಗಳ ವರೆಗೆ ಕುಬೇರನಂತೆ ಕೇವಲ ದುಡ್ಡಿನ ವ್ಯವಹಾರದಲ್ಲಿ ರುವೆನು. ಆಫೀಸು ಬಿಟ್ಟು ಬರುತ್ತಲೆ ಕಂಗಾಲರಿಗಿಂತ ಕಡೆಯಾಗಿ ಹೋಗು ವೆನು. ತೃಷಾತುರನಾದ ಮನುಷ್ಯನು ನದಿಯ ತೀರದಲ್ಲಿ ಕೇವಲ ತೆರೆಗಳ ನ್ನೆಣಿಸುತ್ತ ಕುಳ್ಳಿರುವದು ಹೇಗೆ ತಾಪದಾಯಕವೋ, ಹಾಗೆಯೆ ನಾನು ಅತ್ಯಂತ ವ್ಯಥಿತನಾಗಿದ್ದೇನೆ! ಆಫೀಸಿನಲ್ಲಿಯ ದೊಡ್ಡ ರಕಮಿನ ಒಂದೆರಡು ನೋಟುಗಳನ್ನು ಕದ್ದು ತರಬೇಕೆಂಬ ಬುದ್ಧಿಯೂ ಒಮ್ಮೊಮ್ಮೆ ಹುಟ್ಟುತ್ತದೆ; ಆದರೆ ಭಯದ ಮೂಲಕ ಈ ವರೆಗೆ ನನ್ನ ಕೈಯಿಂದ ಆ ಕೆಲಸವಾಗಿರಲಿಲ್ಲ. ಇಂದು ಏನೇ ಆಗಲಿ. ಆ ನೋಟುಗಳನ್ನು ತರುವೆನು! ಮುಂದಿನ ಮಾತು ಮುಂದೆ! ಸಾಲತೀರಿಸಲಸಮರ್ಥನಾದ ಸಾಲಗಾರನು ಸ್ವತಃ ಸಾಯಲಿಕ್ಕೆ ಸಿದ್ಧನು! ಹೆರವರನ್ನು ಹಿಂಸಿಸಲೂ ಸಿದ್ಧನು.''

ತಂದೆಯ ಈ ವಿಲಾಪವನ್ನು ಕೇಳಿ, ಚಂದ್ರಿಕೆಯು ಕಳವಳಗೊಂಡಳು. ಅವಳ ಶ್ವಾಸವು ಕಟ್ಟಾಗುವದರಲ್ಲಿದ್ದಿತು. ಈಗ ಕೆಲವು ದಿನಗಳಿಂದ ಅವಳ ಹೃದಯದಲ್ಲಿದ್ದ ವ್ಯಥೆಯ ಹಾಹಾಕಾರದ ಮರ್ಮವನ್ನು ಅನ್ಯರಾರೂ ಅರಿಯರು. ಶಾಮನ ಪೆಟ್ಟಿಗೆಯೂ ಆ ಪೆಟ್ಟಿಗೆಯ ಬೀಗದ ಕೈಯೂ ಅವಳ ಬಳಿಯಲ್ಲಿದ್ದವು. ಈ ಭಯಂಕರ ಅವಸ್ಥೆಯಲ್ಲಿ ಪೆಟ್ಟಿಗೆಯೊಳಗಿನ ರೂಪಾಯಿಗಳನ್ನು ತಕ್ಕೊಂಡು ತಂದೆಗೆ ಸಹಾಯ ಮಾಡುವದು ಅವಳ ಕೈಯಲ್ಲಿತ್ತು; ಆದರೆ ಅವಳು ಶಾಮುಸಿಲ್ಲದಿರುವಾಗ ಅವನ ಅನುಮತಿಯಿಲ್ಲದೆ ಪೆಟ್ಟಿಗೆಯನ್ನು ತೆರೆಯುವದು ಅನುಚಿತವೆಂದು ಭಾವಿಸಿದಳು ಕಾರಣ ಅವಳು ಶಾಮನ ರೂಪಾಯಿಗಳು ತನ್ನ ಹತ್ತರ ಇದ್ದುದನ್ನು ತಂದೆಯ ಮುಂದೆ ಇದುವರೆಗೂ ಹೇಳಿರಲಿಲ್ಲ; ಆದರೆ ಇಂದಿನ ತಂದೆಯ ಸ್ಥಿತಿಯನ್ನು ನೋಡಿ ಅವಳಿಂದ ಸಹಿಸುವದಕ್ಕಾಗಲಿಲ್ಲ. ಅವಳು 'ಅಪ್ಪಾ' ಎಂದು ಕೂಗಿದಳು ಗೋವಿಂದ ರಾಯನು ಮಾತನಾಡದೆ ಮಗಳ ಮುಖವನ್ನು ಜಿಜ್ಞಾಸು ನೇತ್ರಗಳಿಂದ ನೋಡತೊಡಗಿದನು.

"ಆಫೀಸಿನಲ್ಲಿ ನೋಟುಗಳನ್ನು ಕಳವು ಮಾಡಿದರೂ ಚಿಂತೆಯಿಲ್ಲ; ಮನೆಯಲ್ಲಿಯ ಆಭರಣಗಳನ್ನು ಹಿಡಿಯಕೂಡದೆಂದು ಅನ್ನುತ್ತಿರುವೆಯಾ? ನನ್ನ ಅಲಂಕಾರಗಳು ಇಷ್ಟೊಂದು ಅವಶ್ಯಕವಾದವುಗಳೆ?" ಚಂದ್ರಿಕೆಯಿಂದ ಮುಂದೆ ಮಾತನಾಡಲಾಗಲಿಲ್ಲ. ಅವಳ ಕಂಠವು ರುದ್ಧವಾಯಿತು. ಕಣ್ಣುಗಳು ಸಜಲವಾದವು.

ಉಪಾಯಾಂತರವನ್ನು ಕಾಣದ ರಮಾಬಾಯಿಯು: "ಚಂದ್ರಿಕೆಯು ಹೇಳಿದಂತೆಯಾದರೂ ಮಾಡಿರಿ. ಯಾವದೊಂದು ಆಭರಣವನ್ನು ತಕ್ಕೊಂಡು ಹೋಗಿ ಒತ್ತಿಯ ಇಟ್ಟು ನೂರಾರು ರೂಪಾಯಿಗಳನ್ನು ತೆಗೆದುಕೊಂಡು ಬನ್ನಿರಿ. ಮುಂದೆ ಅನುಕೂಲತೆಯೊದಗಿದಾಗ ರೂಪಾಯಿ ಕೊಟ್ಟು ಮಗಳ ಆಭರಣವನ್ನು ಮಗಳಿಗೆ ತಿರುಗಿ ತಂದುಕೊಟ್ಟರಾಯಿತು."

ಗೋವಿಂದರಾಯನು ನಕ್ಕುಬಿಟ್ಟು ಹೇಳಿದನು:—"ಇನ್ನು ಆ ಅನುಕೂಲತೆಯು ನಮಗೆ ಎಂದೂ ಒದಗುವಂತೆ ಇಲ್ಲ. ಒಮ್ಮೆ ಮನೆಯಿಂದ ಹೊರಬಿದ್ದ ಸಾಮಾನಗಳು ಮತ್ತೆ ನಮ್ಮ ಗೃಹವನ್ನು ಸೇರವು!"

ತಂದೆಯು ಆಭರಣ ತಕ್ಕೊಳ್ಳಲಿಕ್ಕೆ ಮನಸಿಲ್ಲದವನಾಗಿರುವದನ್ನು ತಿಳಿದ ಚಂದ್ರಿಕೆಯು:—"ಅಪ್ಪಾ, ಈಗ ನೀನು ಹೆಚ್ಚು ವಿಚಾರಕ್ಕೊಳಗಾಗಬೇಡ. ಆ ಆಭರಣವು ಎಲ್ಲಿ ಹೋಗುವದು? ಶಾಮಣ್ಣನು ಬಂದ ಕೂಡಲೆ ನನ್ನ ವಸ್ತುವನ್ನು ನನಗೆ ಬಿಡಿಸಿ ತಂದುಕೊಡುವನು."

ಗೋವಿಂದರಾಯನು ಶಾಮನ ವಿಷಯದಲ್ಲಿ ಯಾವದೋ ಕಾರಣಕ್ಕಾಗಿ ಅತಿಶಯ ಕೋಪಗೊಂಡಿದ್ದನು. ಚಂದ್ರಿಕೆಯ ಮಾತುಗಳಿಂದ ಈ ಕೋಪಾನಲದಲ್ಲಿ ಘೃತಾಹುತಿಯನ್ನು ಹಾಕಿದಂತಾಯಿತು

"ಹಾಗೆಂದಿಗೂ ಆಗಕೂಡದು! ಅಲಂಕಾರವು ಮಾರಿಹೋದರೂ ಚಿಂತೆಯಿಲ್ಲ! ಆ ಕತ್ತೆಯ ಹಣದಿಂದ ನಿನ್ನ ಆಭರಣವು ಬಿಡುಗಡೆಯಾಗಿ ಬರುವದನ್ನು ನಾನೆಂದಿಗೂ ನೋಡೆನು! ಅಂದು ಶಾಮನು ಎಪ್ಪತ್ತೈದು ರೂಪಾಯಿಗಳನ್ನು ತಿಂಗಳೊಂದಕ್ಕೆ ಕೊಡುವೆನೆಂದು ಹೇಳಿದಾಗ, ಅವನ್ನು ಸ್ವೀಕರಿಸಲಿಕ್ಕೆ ನನಗೆ ಎಡರನ್ನೊಡ್ಡಿದವಳು ನೀನೇ ಅಲ್ಲವೇ? ಅನೇ ನೀನ, ಇಷ್ಟರಲ್ಲಿಯೇ ಅವನು ಬಿಡಿಸಿ ತಂದ ಅಲಂಕಾರವನ್ನು ಮೈಮೇಲೆ ಇಟ್ಟುಕೊಳ್ಳಲಿಕ್ಕೆ ಹಾತೊರೆಯುತ್ತಿರುವೆಯಾ?"

ತಂದೆಯ ಈ ಕುಹಕ ಮಾತಿನಿಂದ ಚಂದ್ರಿಕೆಗೆ ಆದ ವ್ಯಥೆಯನ್ನು ವರ್ಣಿಸಲಳವಲ್ಲ. ಅವಳು ತಂದೆಗೆ ಯೋಗ್ಯ ಉತ್ತರವನ್ನು ಕೊಡಬೇಕೆಂದು ಒಮ್ಮೆ ಮನದಂದಳು; ಆದರೆ ತಂದೆಯ ಸದ್ಯಃಸ್ಥಿತಿಯನ್ನರಿತ ಅವಳು ಆ ಆಲೋಚನೆಯನ್ನು ತ್ಯಜಿಸಿ, ಆತ್ಮಸಂಯಮನ ಮಾಡಿಕೊಂಡು ಹೇಳಿದ್ದು:-

"ಅಪ್ಪಾ, ಹಾಗೆ ಹಾತೊರೆಯುವವಳು ನಾನಲ್ಲ! ನೀನು ಅಲಂಕಾರವ ಒತ್ತಿ ಇಡಲಿಕ್ಕೆ ಹಿಂದೆಗೆಯುತ್ತಿರುವ ಲಕ್ಷಣವನ್ನು ಕಂಡು ನಾನು ಹಾಗೆ ಮಾತಾಡಬೇಕಾಯಿತು. ಈಗ ನೀನು ಬೇರೆ ಯಾವ ವಿಚಾರವನ್ನೂ ಮಾಡದೆ, ನನ್ನ ಆಭರಣವನ್ನು ಮಾರಿ ಬಿಡು. ಇದರಿಂದ ದುಡ್ಡು ಹೆಚ್ಚಿಗೆ ಬರುವದು; ಬಡ್ಡಿಯನ್ನು ತೆತ್ತುವ ಪ್ರಸಂಗವೂ ಬರುವದಿಲ್ಲ."

ಸಿಟ್ಟಿನ ಆವೇಶದಲ್ಲಿ ಮನುಷ್ಯರಿಗೆ ಅನ್ಯರ ಮಾತುಗಳ ಸರಿಯಾದ ಅರ್ಥ ತಿಳಿದುಕೊಳ್ಳುವ ಅರಿವು ಇರುವದಿಲ್ಲ. ಅಂತೆಯೇ ಗೋವಿಂದರಾಯನು ಮಗಳ ಈ ಮರ್ಮತೆಯ ಮಾತುಗಳಿಂದ ಶಾಂತನಾಗದೆ:—"ಶಾಮನಿಗೂ ನಮಗೂ ಇರುವ ಸಂಬಂಧವು ಬಹು ದೂರದ್ದು! ಈ ಸಂಬಂಧವನ್ನು ನೋಡುತ್ತಿರಲು ಸಂಬಂಧವಿದೆಯೆಂದು ಹೇಳುವದಕ್ಕಿಂತ ಸಂಬಂಧವಿಲ್ಲೆಂದೇ ಹೇಳುವದು ಯೋಗ್ಯವಾದದ್ದು. ಇಂತಹ ಮನುಷ್ಯನಿಗೆ ಕೇವಲ ತಿಂಗಳಿಗೆ ಕೆಲವು ರೂಪಾಯಿ ಕೊಡುವನೆಂಬ ಕಾರಣದಿಂದ ನನ್ನ ಮನೆಯಲ್ಲಿ ನಾನು ಸ್ಥಳ ಕೊಡಲಾರೆನು! ಇದರಿಂದ ನನಗೆ ಎಷ್ಟೇ ಅಡಚಣಿಯಾದರೂ ಅಡ್ಡಿಯಿಲ್ಲ. ಇನ್ನು ನಾನವನನ್ನು ನನ್ನ ಮನೆಯಲ್ಲಿರಗೊಡುವದಿಲ್ಲ. ಈ ಸಾರೆ ಬಂದ ಕೂಡಲೆ ಹೊರದೂಡಿ ಬಿಡುವೆನು!"

ಪತಿಯ ಮುಖದಿಂದ ಹೊರಟ ತೀರ ವಿಪರೀತವಾದ ಮಾತುಗಳನ್ನು

ಕೇಳಿ ರಮಾಬಾಯಿಯು ವಿಸ್ಮಯದಿಂದ ಮೂಕನಾಡದಾದಳು. ಶಾಮನನ್ನು ಮನೆಗೆ ಕರೆತರುವ ಪ್ರಯತ್ನದಲ್ಲಿ ಬಹು ಉತ್ಸಾಹವನ್ನು ತೋರಿಸಿದ ಪತಿಯು ಇಂದು ಹೀಗೆ ಹೆರವರ ಮೇಲೆ ದೋಷಾರೋಪಣ ಮಾಡುತ್ತಿರುವದರ ಗುಟ್ಟಾವುದು? ಎಂಬದನ್ನು ಊಹಿಸಲಿಕ್ಕೆ ಅವಳಿಂದಾಗಲಿಲ್ಲ.

ಚಂದ್ರಿಕೆಗೆ ವಿಸ್ಮಿತಳಾಗುವದಕ್ಕಾಗಲಿ ದುಃಖಿತಳಾಗುವದಕ್ಕಾಗಲಿ ಅವಕಾಶವಿರಲಿಲ್ಲ. ಅವಳು ಅವಸರದಿಂದ:—"ಅವ್ವಾ, ಅಪ್ಪನು ಕಚೇರಿಗೆ ಹೊರಡುತ್ತಿದ್ದಾನೆ. ಬೇಗನೆ ನನ್ನ ಸರಿಗೆಯನ್ನು ತಂದುಕೊಡು."

ಚಂದ್ರಿಕೆಯನ್ನು ಸಂತಯಿಸುವ ಉದ್ದೇಶದಿಂದ ರಮಾಬಾಯಿಯು:— "ಮಗು, ನೀನು ಇವರ ಮಾತುಗಳನ್ನು ಮನಸ್ಸಿಗೆ ಹಚ್ಚಿಕೊಳ್ಳಬೇಡ. ಇವರಿಗೆ ಸಿಟ್ಟಿನ ಭರದಲ್ಲಿ ಏನು ಮಾತಾಡಬೇಕು, ಏನು ಮಾತಾಡಬಾರದು, ಎಂಬ ಎಚ್ಚರಿಕೆಯೇ ಇರುವದಿಲ್ಲ!"

"ಅವ್ವಾ, ನಾನೇನೂ ಹಚ್ಚಿಕೊಳ್ಳುವದಿಲ್ಲ. ನೀನು ತಡಮಾಡಬೇಡ. ಬೇಗನೆ ತಂದು ಕೊಡು."

ಕೆಲಕೆಲವು ಸಮಯಗಳಲ್ಲಿ ಸಾಂತ್ವನೆಯು ಪ್ರಚ್ಛನ್ನವಾಗಿದ್ದ ಮೂಲ ದುಃಖವನ್ನು ಜಾಗ್ರತಗೊಳಿಸುವದು; ಹಾಗು ಹೆಚ್ಚಿಸುವದು. ರಮಾಬಾಯಿಯ ಸಂತಯಿಸುವಿಕೆಯಿಂದ ಚಂದ್ರಿಕೆಯ ದುಃಖವು ಕಡಿಮೆಯಾಗದೆ, ಮತ್ತಷ್ಟು ಹೆಚ್ಚಿತು ಗೋವಿಂದರಾಯನು ಉಚ್ಚರಿಸಿದ ವಾಕ್ಯಗಳಲ್ಲಿ ಯಾವ ಸಂಗತಿಯು ಅನುಚ್ಚಾರಿತವಾಗಿದ್ದರೂ ಸ್ಪಷ್ಟವಾಗಿ ಒಡಮೂಡಿತ್ತೋ, ಆ ಸಂಗತಿಯ ಕಲ್ಪನೆಯಿಂದ ಚಂದ್ರಿಕೆಯು ಲಜ್ಜಿತಳೂ ವಿಷಾದಿತಳೂ ಆಗಿಹೋದಳು; ಆದರೆ ಈ ವಿಷಮ ಸಮಯದಲ್ಲೂ ಅವಳು 'ಶಾಮನ ದುಡ್ಡು ತಕ್ಕೊಳ್ಳುವದು ಹೀನತೆಯ ಸೂಚಕವು' ಎಂಬದು ಒಮ್ಮೆಯಾದರೂ ತಂದೆಯ ಮನಸ್ಸಿಗೆ ಹೊಳೆದಿರುವದನ್ನು ತಿಳಿದು, ತುಸ ಸಮಾಧಾನವನ್ನು ಹೊಂದಿದಳು.

ಗೋವಿಂದರಾಯನು ಆಫೀಸಿನಲ್ಲಿಯ ನೋಟು ಕಳವು ಮಾಡುವದಕ್ಕಿಂತ ಮಗಳ ಆಭರಣವನ್ನು ಮಾರಿ ಹಣ ತರುವದು ವಿಹಿತವೆಂದು ಮನಸ್ಸಿನಲ್ಲಿ ನಿರ್ಧರಿಸಿಕೊಂಡು, ಹೆಂಡತಿಯು ಕೊಟ್ಟ ಸರಿಗೆಯನ್ನು ತಕ್ಕೊಂಡು ಮನೆಯಿಂದ ಹೊರಬಿದ್ದನು; ಆದರೆ ಕಚೇರಿಯ ಕೆಲಸ ಮುಗಿದ ಬಳಿಕ ಪೇಟೆಯ ಕಡೆಗೆ ಹೋಗದೆ, ಸರಿಗೆಯನ್ನು ತಕ್ಕೊಂಡು ಮನೆಯ ಕಡೆಗೇ ನಡೆದನು.

ಚಂದ್ರಿಕೆಯು ಪಿತನ ದಾರಿಯು ನೋಡುತ್ತ ಹೊರಗೆ ನಿಂತಿದ್ದಳು. ಗೋವಿಂದರಾಯನು ಅವಳನ್ನು ನೋಡಿ ಸಿಟ್ಟಿನ ದನಿಯಿಂದ "ನನಗೆ

ಇಷ್ಟೊಂದು ದುಃಖ ಕೊಟ್ಟು, ನನ್ನನ್ನು ಅಪಮಾನಕ್ಕೆ ಗುರಿಮಾಡಿ, ನೀನು ಆನಂದವನ್ನು ಅನುಭವಿಸಿವೆಯಾ?" ಎಂದು ಕೇಳಿದನು.

ವಿಸ್ಮಿತಳೂ ವ್ಯಥಿತಳೂ ಆದ ಚಂದ್ರಿಕೆಯು "ಅಪ್ಪಾ, ಹೀಗೇಕೆ ಮಾತಾಡುವೆ? ನಾನೇನು ಮಾಡಿದೆನು?" ಎಂದು ಕೇಳಿದಳು.

"ನಿನ್ನ ಬಳಿಯಲ್ಲಿ ಶಾಮುನ ರೂಪಾಯಿಗಳಿವೆ. ಕುಬೇರನು ದಿನಾಲು ಬಂದು ನನಗೆ ತಾಪ ಕೊಡುತ್ತಿರುವದನ್ನು ನೀನು ಕಣ್ಣುಗಳಿಂದ ಕಂಡು ಸುಮ್ಮನಿರುವೆ!"

ಚಂದ್ರಿಕೆಯ ಮೋರೆಯು ಬಾಡಿತು. ಅವಳು ತುಸ ವಿಚಾರ ಮಾಡಿ 'ಅಪ್ಪಾ, ಶಾಮಣ್ಣನ ರೂಪಾಯಿಗಳು ನನ್ನ ಹತ್ತರ ಇಲ್ಲ; ಅವನ ಟ್ರಂಕ ಮಾತ್ರ ಇವೆ." ಎಂದು ಹೇಳಿದಳು.

"ಟ್ರಂಕಿನ ಕೀಲಿಯ ಕೈಯು ಯಾರ ಬಳಿಯಲ್ಲಿದೆ?"

"ನನ್ನ ಹತ್ತರವೇ ಇದೆ."

"ಟ್ರಂಕಿನಲ್ಲಿ ರೂಪಾಯಿಗಳಿವೆಯೋ?"

"ಇವೆ."

"ಎಷ್ಟು?"

ಚಂದ್ರಿಕೆಯು ಗೇಸಿಕೆ ಹಾಕಿ:-"ಎಷ್ಟಿವೆ ಎಂಬದನ್ನು ನಾನು ಸರಿಯಾಗಿ ತಿಳಿಯೆನು; ಬಹುತರ ಇನ್ನೂರು-ಮುನ್ನೂರು ರೂಪಾಯಿಗಳಿರಬಹುದು" ಎಂದು ಹೇಳಿದಳು.

"ಈ ಸಂಗತಿಯನ್ನು ನೀನು ನನಗೆ ಮೊದಲೇ ಏಕೆ ಹೇಳಲಿಲ್ಲ? ಶಾಮುನಿಗೆ ನೀನೊಬ್ಬಳೇ ಸಂಬಂಧಿಕಳೇ? ನಾವು ಹೊರಗಿನವರೆಂದು ನೀನು ತಿಳಿದಿರುವೆಯಾ?"

"ಅಪ್ಪಾ, ಹಾಗಲ್ಲ. ಶಾಮಣ್ಣನ ಅಪ್ಪಣೆಯಿಲ್ಲದೆ ಟ್ರಂಕಿನ ಬೀಗದ ಕೈಯನ್ನು ನಿನ್ನ ಕೈಯಲ್ಲಿ ಕೊಡುವದು ಯೋಗ್ಯವಲ್ಲೆಂದು ನನಗೆ ಅನಿಸಿತು; ಕಾರಣ ನಾನು ನಿನ್ನ ಮುಂದೆ ಈ ಮಾತು ಎತ್ತಿರಲಿಲ್ಲ."

ಗೋವಿಂದರಾಯನು ಕಿಸೆಯೊಳಗಿಂದ ಪತ್ರವನ್ನು ಹೊರದೆಗೆದು, ಅದನ್ನು ಮಗಳ ಕೈಯಲ್ಲಿ ಕೊಟ್ಟು:-"ನಾನು ಆಫೀಸಿನಲ್ಲಿರುವಾಗ ಈ ಪತ್ರವು ಬಂದಿತು. ಪತ್ರವನ್ನು ಓದಿಕೊಂಡು ವಿಚಾರಿಸಿ ನೋಡು. ಶಾಮುನ ರೂಪಾಯಿಗಳಿಗೆ ಕೈ ಹಚ್ಚುವ ಅಧಿಕಾರವು ನನಗುಂಟಾಗಿದೆಯೋ ಇಲ್ಲವೋ ಎಂಬದು ನಿನಗೆ ಗೊತ್ತಾಗುವದು"

ಚಂದ್ರಿಕೆಯು ಕರುಣಾಜನಕ ದೃಷ್ಟಿಯಿಂದ, ಜನಕನನ್ನು ನೋಡುತ್ತ

"ಅಪ್ಪಾ, ನೀನು ವಿಚಾರ ಮಾಡಿರಲು, ಅದೇ ಸಂಗತಿಯ ಬಗ್ಗೆ ನಾನು ವಿಚಾರ ಮಾಡುವ ಕಾರಣವಿಲ್ಲ. ನೀನೀಗ ಒಳಗೆ ಹೋಗಿ ಕೈಕಾಲುತೊಳೆದುಕೊಂಡು ಉಪಹಾರ ಮಾಡು. ನಾನು ನಿನಗೆ ಟ್ರಂಕನ್ನೂ ಕೀಲಿಯ ಕೈಯನ್ನೂ ತಂದು ಕೊಡುವೆನು." ಎಂದು ಹೇಳಿ ಪತ್ರವನ್ನು ತಿರುಗಿ ತಂದೆಯ ಕೈಯಲ್ಲಿ ಕೊಟ್ಟಳು.

"ಪತ್ರವನ್ನು ಒಮ್ಮೆ ಓದಿ ನೋಡಿಕೊಂಡಿದ್ದರೆ ನೆಟ್ಟಗಾಗುತ್ತಿತ್ತು."

ಚಂದ್ರಿಕೆಯು ತನ್ನ ಸಜಲ ನೇತ್ರಗಳನ್ನು ಮೇಲಕ್ಕೆತ್ತಿ 'ಕಾರಣವಿಲ್ಲ ವಪ್ಪಾ!' ಎಂದು ಹೇಳಿದಳು.

ಗೋವಿಂದರಾಯನು ಪತ್ರವನ್ನು ಮತ್ತೆ ಕಿಸೆಯಲ್ಲಿರಿಸಿಕೊಂಡನು. ಮಗಳ ಕಾತರ ಮುಖವನ್ನು ನೋಡಿ ಅವನು ಬೇರೆ ಮಾತನಾಡಲಿಲ್ಲ.

ಚಂದ್ರಿಕೆಯು ಶಾಮನ ಟ್ರಂಕನ್ನು ತಂದೆಯ ಸಮಕ್ಷಮ ತೆರೆದ ಬಳಿಕ ಗೋವಿಂದರಾಯನು 'ಒಳಗೆ ಎಷ್ಟು ರೂಪಾಯಿಗಳಿವೆ?' ಎಂದು ವಿಚಾರಿಸಿದನು. ಚಂದ್ರಿಕೆಯು ಎಣಿಕೆ ಮಾಡಿ 'ಐನೂರಾ ನಾಲ್ವತ್ತೇಳು ರೂಪಾಯಿ ಹನ್ನೆರಡಾಣೆಗಳಿವೆ' ಎಂದು ಉತ್ತರ ಕೊಟ್ಟಳು. ಗೋವಿಂದರಾಯನು ಹಣದ ಮೇಲೆ ತೀಕ್ಷ್ಣ ದೃಷ್ಟಿಯನ್ನು ಚಲ್ಲಿ, ತುಸ ಹೊತ್ತು ಆಲೋಚಿಸಿ:-"ಒಳ್ಳೇದು. ಈಗ ನನಗೆ ನೂರೈವತ್ತು ರೂಪಾಯಿಗಳನ್ನು ಕೊಟ್ಟು, ಟ್ರಂಕ ಮುಚ್ಚಿ ಒಳಗಿರಿಸಿಬಿಡು"

"ಅಪ್ಪಾ, ನಿನಗೆ ಬೇಕಾದಷ್ಟನ್ನು ನೀನೇ ತೆಗೆದುಕೋ."

"ಬೇಡ. ಶಾಮನು ಟ್ರಂಕನ್ನು ನಿನ್ನ ಸ್ವಾಧೀನಪಡಿಸಿರುವನೆಂದ ಬಳಿಕ ನೀನೇ ಆ ದುಡ್ಡಿನ ವ್ಯವಹಾರ ಮಾಡುವದು ಯೋಗ್ಯವಾದದ್ದು."

ಚಂದ್ರಿಕೆಯು ಬೇರೆ ಮಾತನಾಡದೆ ನೂರೈವತ್ತು ರೂಪಾಯಿಗಳನ್ನು ತಂದೆಯ ಮುಂದಿರಿಸಿದಳು.

ದೂರದಲ್ಲಿ ನಿಂತು ಈ ವ್ಯವಹಾರವನ್ನು ನೋಡುತ್ತಿದ್ದ ರಮಾಬಾಯಿಯು ಮುಂದೆ ಬಂದು "ನಿಮಗೆ ಎಷ್ಟತ್ತೈದೇ ರೂಪಾಯಿಗಳು ಬೇಕಿವೆ; ಅಂದ ಬಳಿಕ ಹೆಚ್ಚಿಗೇಕೆ ತಕ್ಕೊಳ್ಳುವಿರಿ?" ಎಂದು ಕೇಳಿದಳು.

ಗೋವಿಂದರಾಯನು ಕೋಪದಿಂದ—"ಕೇವಲ ಸಾಲದ ಕಂತವನ್ನು ಮುಟ್ಟಿಸಿದರೆ ನಾನು ನಿಶ್ಚಿಂತನಾಗುವೆನೆಂದು ತಿಳಿದಿರುವೆಯಾ? ಈ ಸಾರೆ ವಿಮಾ ಕಂಪನಿಯ ಕಂತದ ಹಣವನ್ನು ತುಂಬಬೇಕಾಗಿದೆ. ಇನ್ನೂ ಅನೇಕ ಕೆಲಸಗಳಿವೆ. ನಾನು ಇವೆಲ್ಲವನ್ನು ತೀರಿಸಿ ಶಾಂತಿಯನ್ನು ಪಡೆಯಬೇಕೆಂದು ಮಾಡಿದ್ದೇನೆ. ಮುಂದಿನ ತಿಂಗಳಲ್ಲಿ ಶಾಮನ ಕಡೆಯಿಂದ ರೂಪಾಯಿಗಳನ್ನು ತಕ್ಕೊಳ್ಳದಿದ್ದರೂ ನಡೆಯಬಹುದು."

ಪತಿಯು ಕೋಪವನ್ನು ನೋಡಿ ರಮಾಬಾಯಿಯು ಸುಮ್ಮನಾದಳು. ಚಂದ್ರಿಕೆಯೂ ಈ ವಿಷಯದಲ್ಲಿ ಮಾತು ಬೆಳೆಸಲಿಲ್ಲ. ಎಲ್ಲರೂ ಕೆಲಹೊತ್ತು ಸುಮ್ಮನಿದ್ದರು. ಬಳಿಕ ಚಂದ್ರಿಕೆಯು 'ಅಪ್ಪಾ' ಎಂದು ಕರೆದಳು.

ಮಗಳ ಗಂಭೀರಸ್ವರದಿಂದ ಚಕಿತನಾದ ಗೋವಿಂದರಾಯನು 'ಏಕೆ?' ಎಂದು ಕೇಳಿದನು.

"ನೀನು ನನ್ನದೊಂದು ಮಾತನ್ನು ನಡೆಸುವೆಯಾ?"

"ಯಾವ ಮಾತದು? ಹೇಳು."

"ಶಾಮಣ್ಣನ ಪತ್ರ ಬರದಿದ್ದರೆ ಸರಿಗೆಯ ವಿನಿಮಯದಿಂದ ಧನವನ್ನು ತರಬೇಕಾಗುತ್ತಿತ್ತು. ಈಗ ಶಾಮಣ್ಣನ ಪೆಟ್ಟಿಗೆಯೊಳಗಿಂದ ಹಣವನ್ನು ತಕ್ಕೊಂಡಿರುವೆವೆಂದ ಬಳಿಕ ಆ ಸರಿಗೆಯನ್ನು ಈ ಪೆಟ್ಟಿಗೆಯಲ್ಲಿ ಅಡವಾಗಿರಿಸುವದು ಸರಿಯಲ್ಲವೆ?"

ಚಂದ್ರಿಕೆಯ ಮಾತು ಕೇಳಿ ವಾದ-ವಿವಾದವೆಲ್ಲಿ ಬೆಳೆಯುವದೋ ಎಂದು ಭಾವಿಸಿ ರಮಾಬಾಯಿಯು ಚಿಂತಿತಳಾದಳು; ಆದರೆ ಗೋವಿಂದರಾಯನು ಸಿಟ್ಟಿಗೇಳಲಿಲ್ಲ. ಶಾಂತರೀತಿಯಿಂದ ತುಸುಹೊತ್ತು ವಿಚಾರಿಸಿ:— "ಮಗು, ನೀನೆನ್ನುವದು ಅಯೋಗ್ಯವಲ್ಲ. ಹೆಚ್ಚು ರೂಪಾಯಿಗಳನ್ನು ತಕ್ಕೊಂಡಿರುವೆವೆಂದ ಬಳಿಕ, ಈ ಹಣಕ್ಕೆ ಪ್ರತಿಯಾಗಿ ಒಂದು ವಸ್ತುವನ್ನಿಡುವದು ನ್ಯಾಯವಾದದ್ದು; ಆದರೆ ಶಾಮನು ಬಂದ ಬಳಿಕ ನೀನಿಟ್ಟ ಆಭರಣವನ್ನು ನಿನಗೆ ತಿರುಗಿ ಕೊಡಬಂದರೆ?"

ಚಂದ್ರಿಕೆಯು ನಿರ್ಧರದ ಸ್ವರದಿಂದ "ಎಂದೂ ತಿರುಗಿ ತಕ್ಕೊಳ್ಳುವದಿಲ್ಲ! ನೀನು ಶಾಮಣ್ಣನ ಹಣ ಮುಟ್ಟಿಸುವವರೆಗೆ ನಾನು ಆ ಆಭರಣವನ್ನು ಮುಟ್ಟುವದಿಲ್ಲ ಸಹ!

ಗೋವಿಂದರಾಯನು ಸಚಿಂತನಾಗಿ ಹೇಳಿದ್ದು:-"ನಾನು ಆ ಅಲಂಕಾರವನ್ನು ಬಿಡಿಸಿಕೊಟ್ಟೇ ಕೊಡುವೆನು. ಒಂದು ವೇಳೆ ಈ ಅವಧಿಯಲ್ಲೇ ಶಾಮನು ಅಲಂಕಾರವನ್ನು ತಕ್ಕೊಳ್ಳಲಿಕ್ಕೆ ಬಹಳವಾಗಿ ಪೀಡಿಸಿದರೆ, ಒಲ್ಲೆನೆನ್ನುವದೂ ಶಿಷ್ಟವ್ಯವಹಾರವಾಗದು. ಮುಂಜಾನೆ ನಾನು ಶಾಮನ ಮೇಲೆ ಸಿಟ್ಟಾಗಿದ್ದುದು ನಿಜ; ಆದರೆ ಈ ವರೆಗಿನ ವಿಚಾರದಿಂದ ನನ್ನ ಆ ಕೋಪವು ಸರಿಯಲ್ಲವೆಂದು ನನಗೆ ಅನಿಸಿದೆ. ಶಾಮನು ನಿಜವಾಗಿಯೂ ನಮ್ಮ ಹಿತಕರ್ತನು! ಪರಮಾಪ್ತನು!" ಬಳಿಕ ಗೋವಿಂದರಾಯನು ಹೆಂಡತಿಯನ್ನು ಕುರಿತು "ಮುಂಜಾವಿನಲ್ಲಿ ನಾನು ಉಚ್ಚರಿಸಿದ ವಾಕ್ಯಗಳಲ್ಲಿಯ ಒಂದು ಶಬ್ದವೂ ಶಾಮನ ಕಿವಿಗೆ ಬೀಳದಂತೆ ಎಚ್ಚರಿಕೆಯಿಂದಿರು! ನಾನಾಡಿದ ಮಾತು

ಗಳನ್ನು ಕೇಳಿದರೆ, ಅವನು ಬಹಳವಾಗಿ ನೊಂದುಕೊಂಡಾನು!" ಎಂದು ಹೇಳಿದನು.

ಮುಂಜಾನೆ ವ್ಯಥೆಗೊಂಡವ್ದರ ಹತ್ತುಪಟ್ಟು ವ್ಯಥಿತಳಾದ ಚಂದ್ರಿಕೆಯು ತನ್ನ ಕೋಣೆಯ ಕಡೆಗೆ ಹೊರಟಳು ತನ್ನ ಸಶಕ್ತ ತಂದೆಯು ದಾರಿದ್ರ್ಯ ರೋಗದಿಂದ ಜರ್ಜರಿತನಾಗಿ ಹೇಗೆ ದುರ್ಬಲನಾಗಿರುವನೆಂಬದನ್ನು ವಿಚಾರಿಸಿ ತಿಳಿದ ಅವಳು ಕಣ್ಣುಗಳಿಂದ ಬಳಬಳನೆ ನೀರ ಉದುರಿಸಿದಳು. ಅಂಧಃಕಾರಾವೃತವಾದ ಒಂದು ಭವಿಸ್ಯತ್ತಿನ ಕಲ್ಪನೆಯ ಸಂವೇಹದಿಂದ ಅವಳು ತನ್ನ ಪ್ರತ್ಯವಯವದ ಶಕ್ತಿಯನ್ನು ಒಂದು ಸ್ಥಳದಲ್ಲಿ ಏಕೀಕರಿಸಿ, ತನ್ನನ್ನು ಸಬಲಳನ್ನಾಗಿ ಮಾಡಿಕೊಳ್ಳಲು ಯತ್ನಿಸಿ, ಮನಸ್ಸಿನಲ್ಲಿಯೇ ದೇವರನ್ನು ಬೇಡಿಕೊಂಡಳು: "ಹೆ, ಸರ್ವಶಕ್ತಿವಂತನಾದ ಭಗವಂತನೆ, ನಿನ್ನ ಆಸೀಮ ಶಕ್ತಿಯ ಒಂದು ಕಣವನ್ನು ಈ ಅಬಲೆಯ ಹೃದಯದಲ್ಲಿ ಊರಿ, ಇವಳನ್ನು ಕಬ್ಬಿಣದಂತೆ ಶಕ್ತಳನ್ನಾಗಿಯೂ ಕಲ್ಲಿನಂತೆ ಕಠೋರಳನ್ನಾಗಿಯೂ ಮಾಡು! ಹೊರಗಿನ ಎಷ್ಟೇ ಆಘಾತಗಳು ಬಂದು ಅಪ್ಪಳಿಸಿದರೂ ಈ ಹೃದಯವು ಅವುಗಳನ್ನೆಲ್ಲ ಶಾಂತರೀತಿಯಿಂದ ತಡಕೊಳ್ಳಲಿಕ್ಕೆ ಶಕ್ತವಾಗಲಿ!"

ಮುಂದೆ ಕೆಲವು ದಿವಸಗಳ ತರುವಾಯ ಶಾಮನು ಬಂದನು. ಒಂದು ದಿನ ಶಾಮನು ಚಂದ್ರಿಕೆಯ ಸಮಕ್ಷಮ ಟ್ರಂಕ ತೆರೆದು ಒಳಗಿರುವ ಸರಿಗೆಯನ್ನು ನೋಡಿ ನಗೆಮುಖದಿಂದ ನುಡಿದದ್ದು:—"ಚಂದ್ರಿಕೆ, ನನ್ನ ಟ್ರಂಕು ನಿನ್ನ ಸಹವಾಸದಿಂದ ವಿಲಕ್ಷಣವಾದ ಜಾದುವಿದ್ಯೆಯನ್ನು ಕಲಿತಿದೆ! ಯಾವ ವಸ್ತುವನ್ನು ನಾಸಿದರಲ್ಲಿ ಇರಿಸಿದ್ದಿಲ್ಲವೋ ಆ ವಸ್ತುವು ಸದ್ಯಕ್ಕೆ ನನಗೆ ಇದರಲ್ಲಿ ಇರುವಂತೆ ಕಾಣುತ್ತಿದೆ!"

ಚಂದ್ರಿಕೆಯು ಮುಗುಳು ನಗೆಯಿಂದ:-"ಕೇವಲ ಇಷ್ಟೇ ಅಲ್ಲ ಟ್ರಂಕು ದೊರಕಿಸುವ ವಿದ್ಯೆಯನ್ನು ಕಲಿತಂತೆ, ಕಳೆದುಕೊಳ್ಳುವ ವಿದ್ಯೆಯನ್ನೂ ಕಲಿತುಕೊಂಡಿದೆ! ನೀನು ಇನ್ನೂ ಹೆಚ್ಚು ಲಕ್ಷ್ಯಗೊಟ್ಟು ನೋಡಿದರೆ, ಯಾವ ವಸ್ತುವನ್ನು ನೀನು ಅದರಲ್ಲಿ ಇರಿಸಿ ಹೋಗಿದ್ದೆಯೋ ಅದು ಕಾಣದಾಗಿ, ನನ್ನ ಮಾತಿನ ನಿಜತ್ವವನ್ನು ಕಂಡುಕೊಳ್ಳುವೆ!"

ಒಂದೂವರೆನೂರು ರೂಪಾಯಿ ತಕ್ಕೊಂಡು, ಪ್ರತಿಯಾಗಿ ಸರಿಗೆಯನ್ನಿಟ್ಟ ಸಂಗತಿಯನ್ನು ಗೋವಿಂದರಾಯನಿಂದ ಶಾಮನು ಕೇಳಿ ತಿಳಿದಿದ್ದನು. ಅವನು ನಗೆಮೋರೆಯಿಂದ:—"ಈ ತರದ ಜಮಾಖರ್ಚಿನ ಜಾದುವಿದ್ಯೆಯು ನನಗೆ ಸೇರದು. ಕೇವಲ ಕಳೆದುಕೊಳ್ಳಬಲ್ಲ ಜಾದುವಿದ್ಯೆಯನ್ನೇ ನಾನು ಪ್ರೀತಿಸುತ್ತೇನೆ. ಆದುದರಿಂದು ನಾನು ಈ ಅಕಾರಣವಾಗಿ ಸಿಕ್ಕ ವಸ್ತುವನ್ನು

ತಕ್ಕೊಳ್ಳಬಯಸುವದಿಲ್ಲ; ನೀನಿದನ್ನು ಒಯ್ದು ನಿನ್ನ ಪೆಟ್ಟಿಗೆಯಲ್ಲಿಟ್ಟುಕೋ.'' ಶಾಮನು ಚಂದ್ರಿಕೆಗೆ ಸರಿಗೆಯನ್ನು ಕೊಡಹೋದನು.

ಚಂದ್ರಿಕೆಯು ಚಂಚಲಳಾಗದೆ ಶಾಂತರೀತಿಯಿಂದ, ದೃಢಸ್ವರದಿಂದ ಹೇಳಿದ್ದು:—''ಶಾಮಣ್ಣಾ, ಸೇರುವದು-ಸೇರದಿರುವದು ಮೊದಲಾದ ಭಾವನೆಗಳು ನನಗೂ ಉಂಟು. ಆದುದರಿಂದ ಈ ವಸ್ತುವನ್ನು ನಾನು ತಕ್ಕೊಂಡು ಹೋಗಿ ಪೆಟ್ಟಿಗೆಯಲ್ಲಿಡುವದೊತ್ತಟ್ಟಿಗಿರಲಿ, ಮುಟ್ಟಲಿಕ್ಕೆ ಸಹ ಸಮ್ಮತಿಸಲಾರೆನು! ನೀನಿದನ್ನು ಎಲ್ಲಿಂದ ಹೊರದೆಗೆದೆಯೋ ಅಲ್ಲಿಯೇ ಇರಿಸಿಬಿಡು.''

ಶಾಮನು ಚಂದ್ರಿಕೆಯ ಮಾತುಗಳನ್ನು ಕೇಳಿ, ಮುಖಭಾವವನ್ನು ನಿರೀಕ್ಷಿಸಿ, ಪ್ರಕೃತ ವಾದವಿವಾದದ ಮೀಮಾಂಸೆಯು ಕೇವಲ ಪರಿಹಾಸದಿಂದಾಗದೆಂಬದನ್ನು ಗೊತ್ತುಮಾಡಿಕೊಂಡನು. ತರುವಾಯ ಸ್ಪಷ್ಟ ರೀತಿಯಿಂದ ಚರ್ಚೆಯನ್ನು ಮುಂದುವರಿಸಿದನು.

ಸುಮಾರು ಅರ್ಧ ತಾಸು ವಾದ-ವಿವಾದವನ್ನು ಮಾಡಿಯೂ ಕೃತಕಾರ್ಯನಾಗದ ಶಾಮನು ಸಿಟ್ಟಿಗೆದ್ದು:—''ನಾನು ಕೊಟ್ಟಿದ್ದ ರೂಪಾಯಿಗಳನ್ನು ಮನಬಂದಂತೆ ವೆಚ್ಚಮಾಡುವ ಅಧಿಕಾರವು ನಿನಗಿಲ್ಲದ ಬಳಿಕ, ನನ್ನ ರೂಪಾಯಿಗಳನ್ನು ತಕ್ಕೊಂಡು ಸಾವಕಾರೀ ವ್ಯವಹಾರವನ್ನು ಮಾಡುವ ಅಧಿಕಾರವಾದರೂ ನಿನಗೆ ಹೇಗೆ ಪ್ರಾಪ್ತವಾಗುವದು? ವಸ್ತುವನ್ನು ಒತ್ತೆಯಾಗಿಟ್ಟುಕೊಂಡು ಸಾಲಕೊಡೆಂದು ನಾನೇನು ನಿನಗೆ ಹೇಳಿ ಹೋಗಿದ್ದೆನೆ? ನೀನು ಸ್ವಾಭಿಮಾನದ ಮಾತನಾಡುವೆ. ಮನೆತನದ ಗೌರವದ ಮಾತೆತ್ತುವೆ! ಆದರೆ ಚಂದ್ರಿಕೆ, ಆ ಸ್ವಾಭಿಮಾನ, ವಂಶಗೌರವ ಮೊದಲಾದ ಭಾವನೆಗಳು ನನ್ನಲ್ಲಿಲ್ಲವೇನು? ಸ್ತ್ರೀಯರ ಆಭರಣವನ್ನು ಅಡವಾಗಿಟ್ಟುಕೊಂಡು ಕೈಗಡ ಕೊಡುವ ಹೋರೆಯನ್ನು ನಾನಿದುವರೆಗೆ ಎಂದೂ ಮಾಡಿದವನಲ್ಲ!''

ಚಂದ್ರಿಕೆಯು ಕೈಜೋಡಿಸಿ ಹೇಳಿದಳು:—''ಶಾಮಣ್ಣಾ, ಈ ಪ್ರಸಂಗದಲ್ಲಿ ನನ್ನಿಂದ ಅನ್ಯಾಯವಾಗುತ್ತಿದ್ದರೆ, ದಯಮಾಡಿ ನೀನು ನನ್ನನ್ನು ಕ್ಷಮಿಸು; ಆದರೆ ಈ ಆಭರಣವನ್ನು ತಿರುಗಿ ತಕ್ಕೊಳ್ಳುವ ಪ್ರಸಂಗವನ್ನು ಮಾತ್ರ ತರಬೇಡ! ನನ್ನ ಈ ಬೇಡಿಕೆಯನ್ನು ನೀನು ಸರ್ವಥಾ ಅಲ್ಲಗಳೆಯಬೇಡ ಕಂಡೆಯಾ!''

ಶಾಮನು ಕೋಪದಿಂದಲೇ:—''ಇದು ಬೇಡಿಕೆಯಲ್ಲ, ಅತ್ಯಾಚಾರವು! ಅನ್ಯಾಯದ ಪರಮಾವಧಿಯು! ಸ್ವಾಭಿಮಾನದ ದೊಡ್ಡ ದೊಡ್ಡ ಮಾತುಗಳನ್ನಾಡುತ್ತಿರುವೆ! ಈ ಸ್ವಾಭಿಮಾನದೊಡನೆ ಶಿಷ್ಟಾಚಾರದ ಅರಿವೂ ಇದ್ದರೆ ಒಳಿತಾಗುತ್ತಿತ್ತು! ಈ ಸರಿಗೆಯಿಂದ ನೀನು ನಾನು ಕೊಟ್ಟ ಸಾಲವನ್ನು

ತೀರಿಸಬಲ್ಲೆಯಾದರೂ ನಾನು ಮಾಡಿದ ಉಪಕಾರವನ್ನು ತೀರಿಸಲಾರೆ! ಎಷ್ಟಾದರೂ ನೀನಿನ್ನೂ ಹುಡುಗಿ! ನಿನಗೆ ಇದಕ್ಕೂ ಹೆಚ್ಚಿಗೆ ಹೇಳಿ ಪ್ರಯೋಜನವಿಲ್ಲ!"

ಶಾಮನು ತುಸ ಹೊತ್ತು ಸುಮ್ಮನೆ ಕುಳಿತು ಮತ್ತೆ ಮಾತಾಡತೊಡಗಿದನು:—"ಚಂದ್ರಿಕೆ, ನೀನನ್ನುವಂತೆ ಆಗಲಿ. ಸದ್ಯಕ್ಕೆ ಈ ಸಂಗೆಯು ನನ್ನ ಸಂದುಕದಲ್ಲಿಯೇ ಇರಲಿ ಈಗ ನೀನು ನನ್ನೊಡನೆ ಆಚರಿಸಿದ ವ್ಯವಹಾರಕ್ಕಾಗಿ ಮುಂದೆ ನಿನಗೆ ಪಶ್ಚಾತ್ತಾಪವಾಗದಿರದು! ಆಗಲಾದರೂ ನೀನು ನನ್ನ ಹತ್ತರ ಬಂದು ಈ ಸಂಗೆಯನ್ನು ಬೇಡಿ ತಕ್ಕೊಂಡು ಹೋಗಲಿಕ್ಕೇಬೇಕು! ಆಗ ನೀನು ಆತ್ಮಗೌರವದ ಆವರಣದಲ್ಲಿ ಆತ್ಮಪ್ರವಂಚನೆಯನ್ನು ಮಾಡಿಕೊಳ್ಳದಿರು! ಯಾಕಂದರೆ, ಪೊಳ್ಳು ಸ್ವಾಭಿಮಾನದಂಥ ಕೆಟ್ಟ ಸಂಗತಿಯು ಬೇರೊಂದಿಲ್ಲ! ನಾನೆನ್ನುವುದು ತಿಳಿಯಿತೇ? ಇನ್ನು ನೀನು ಹೋಗಬಹುದು."

ಚಂದ್ರಿಕೆಯು ಕ್ಷಣಕಾಲ ನೀರವವಾಗಿ ನಿಂತು, ಬಳಿಕ ಮೆಲ್ಲಮೆಲ್ಲನೆ ನಡೆದು ತನ್ನ ಕೋಣೆಗೆ ಹೋದಳು. ವಿಹಂಗಿನಿಯು ವ್ಯಾಧನ ಸಲುವಾಗಿಯೂ ವ್ಯಥೆಪಡಬೇಕಾಗಿ ಬಂದುದು ಆಶ್ಚರ್ಯವೇ ಸರಿ!

---

## ೧೪

ಮುಂದೆ ಕೆಲವು ದಿನಗಳು ಸಹಜರೀತಿಯಲ್ಲಿ ಕ್ರಮಿಸಿದವು. ಈ ಅವಧಿಯಲ್ಲಿ ಶಾಮನು ಕೆಲವು ದಿವಸ ಮುಂಬಯಿಯಲ್ಲಿರುತ್ತಿದ್ದನು. ಮತ್ತೆ ಕೆಲವು ದಿವಸಗಳನ್ನು ಪ್ರವಾಸದಲ್ಲಿ ಕಳೆಯುತ್ತಿದ್ದನು. ಹೀಗೆ ನಡುನಡುವೆ ಪ್ರವಾಸಕ್ಕೆ ಹೊರಡುವಾಗ್ಗೆ ಟ್ರಂಕಿನ ಬೀಗದ ಕೈಯನ್ನು ಚಂದ್ರಿಕೆಯ ಕೈಯಲ್ಲಿ ಕೊಟ್ಟು, 'ಒಳಗಿರುವ ರೂಪಾಯಿಗಳನ್ನು ಸ್ವೇಚ್ಛೆಯಂತೆ ವೆಚ್ಚ ಮಾಡುವ ಅಧಿಕಾರವು ನಿನಗಿದೆ' ಎಂದು ಹೇಳಿ ಹೋಗುತ್ತಿದ್ದನು. ಚಂದ್ರಿಕೆಯು ಮೊದಮೊದಲು ಈ ಅಧಿಕಾರವನ್ನು ಬಜಾಯಿಸಲಿಕ್ಕೆ ಸಂಕೋಚಗೊಳ್ಳುತ್ತಿದ್ದಳು; ಆದರೆ ಮುಂದೆ ಈ ಸಂಕೋಚವು ಕ್ರಮೇಣ ಕಡಿಮೆಯಾಗಿ, ಶಾಮನನ್ನು ಕೇಳದೆ ಟ್ರಂಕಿನಲ್ಲಿದ್ದ ರೂಪಾಯಿಗಳನ್ನು ಅಪ್ಪನ ಉಪಯೋಗಕ್ಕೆ ಕೊಡತೊಡಗಿದಳು. 'ನನಗೇನೂ ರೂಪಾಯಿಗಳು ಬೇಕಾಗಿಲ್ಲ. ಶಾಮನ ರೂಪಾಯಿಗಳು ಅಪ್ಪನಿಗೆ ಸಾಲದ ಕಂತವನ್ನು ಮುಟ್ಟಿಸಲಿಕ್ಕೆ ಬೇಕಾಗುತ್ತವೆ. ಇದಕ್ಕೆ ಶಾಮನ ಸಮ್ಮತಿಯು ಉಂಟೇ ಉಂಟು ಅಂದಬಳಿಕ ನಾನು ಅವುಗಳನ್ನು ನನ್ನ ಹತ್ತರ ಇಟ್ಟುಕೊಂಡು, ಪ್ರಸಂಗ ವಿಶೇಷದಲ್ಲಿ

ಅಪ್ಪನಿಗೆ ಕೊಡಲಿಕ್ಕೆ ಅಡ್ಡಿಯೇನು? ಈ ವ್ಯವಹಾರದಲ್ಲಿ ನನಗೆ ಲಾಭ-ಹಾನಿಗಳೇನೂ ಇಲ್ಲ. ವ್ಯವಹಾರವನ್ನು ನಡೆಸದಿದ್ದರೆ ಮಾತ್ರ ಶಾಮನಿಗೆ ವ್ಯಥೆಯಾಗುವದು!' ಎಂದು ಆವಳು ಭಾವಿಸಿದ್ದಳು ಶಾಮನಾದರೋ ಬುದ್ಧಿಪೂರ್ವಕವಾಗಿಯೇ ಚಂದ್ರಿಕೆಗೆ ಈ ಅಧಿಕಾರವನ್ನು ಕೊಟ್ಟಿದ್ದನು. ತನ್ನ ಈ ಉದಾರ ಹಾಗು ವಿಶ್ವಾಸಿಕ ವರ್ತನದಿಂದ ಚಂದ್ರಿಕೆಯ ಮನಸ್ಸು ದ್ರವಿಸಲೇಬೇಕೆಂದು ಆವನು ತರ್ಕಿಸಿದ್ದನು. ಹದವಾದ ಭೂಮಿಯಲ್ಲಿ ಬೀಜ ಬಿತ್ತಿದ ಬಳಿಕ ಮೊಳಕೆಯೊಡೆಯಲೇಬೇಕೆಂಬ ಮನವರಿಕೆಯು ಆವನಿಗಿದ್ದಿತು.

ಮುಂದೆ ಒಂದು ದಿನ ಶಾಮನು ಚಂದ್ರಿಕೆಯನ್ನು ಕುರಿತು--"ಚಂದ್ರಿಕೆ, ನಿನ್ನೊಡನೆ ಮಾತನಾಡಬೇಕಾಗಿದೆ" ಎಂದನು. ಚಂದ್ರಿಕೆಯು ತನ್ನ ಕೆಲಸ ತೀರಿಸಿಕೊಂಡು 'ಶಾಮಣ್ಣಾ, ಏನು ಮಾತಾಡುವದು? ಎಂದು ಹತ್ತರ ಬಂದು ಕುಳಿತಳು. ಬಳಿಕ ಶಾಮನು "ಚಂದ್ರಿಕೇ, ಸ್ವಾಮಿರಾಯನು ಎರಡನೆಯ ಲಗ್ನದ ಪ್ರಯತ್ನದಲ್ಲಿ ತೊಡಗಿದ್ದಾನೆ. ನೀನಿನ್ನೂ ಕೋಮಲ ತನುವಿನ ತರುಣಿ! ನಿನ್ನೆಯೇ ನನಗೆ ಈ ಸಂಗತಿ ತಿಳಿಯಿತು. ಇದನ್ನು ತಿಳಿಸುವದಕ್ಕಾಗಿಯೇ ನಿನ್ನನ್ನು ಕರೆದೆನು."

ಚಂದ್ರಿಕೆ—"ಅಣ್ಣಾ, ಇದರಲ್ಲಿ ನನ್ನ ಯತ್ನವೇನಿದೆ? ನಾನು ಏನು ಮಾಡಬಲ್ಲೆನು?"

ಶಾಮನು—"ನೀನೇಕೆ ಮಾಡಹೋಗುವೆ? ನಾನು ನಿನ್ನ ಕಲ್ಯಾಣ ಮಾಡುವೆನು. ನನ್ನ ಮೇಲೆ ನಿನ್ನ ಪ್ರೇಮ-ವಿಶ್ವಾಸಗಳು ಮಾತ್ರ ಇರಬೇಕು."

ಚಂದ್ರಿಕೆಯು (ಶಾಮನ ಹೃದಯವನ್ನು ತಿಳಿದು ತಿರಸ್ಕಾರದಿಂದ) "ಶಾಮಣ್ಣಾ, ಈ ವಿಷಯದಲ್ಲಿ ನನ್ನೆದುರಿಗೆ ಏನೂ ಹೇಳಬೇಡ. ನನ್ನ ಅದೃಷ್ಟದಲ್ಲಿದ್ದದ್ದನ್ನು ನಾನು ಅನುಭವಿಸುವೆನು."

ಶಾಮನು (ನಗುತ್ತ) 'ಚಂದ್ರಿಕೇ, ನೀನು ಹೀಗೆಯೇ ಇರಬಲ್ಲೆಯಾ?"

ಚಂದ್ರಿಕೆ—"ನಿಶ್ಚಯವಾಗಿಯೂ ಇರಬಲ್ಲೆನು."

ಶಾಮನು—"ಚಂದ್ರಿಕೇ, ನಿನ್ನ ಈ ಮಾತು ಕೊನೆಯವರೆಗೂ ತಾಳದು. ಇತ್ತ ನೋಡು. ನಾನು ನಿಮ್ಮ ಮನೆಯನ್ನು ಹಿಡಿದು ನೀರಿನಂತೆ ಯಾಕೆ ದುಡ್ಡು ವೆಚ್ಚಮಾಡುತ್ತಿರುವೆನೆಂಬದರ ಗೂಢವನ್ನು ವಿಚಾರಿಸು. ನನ್ನ ವಿಚಾರದಂತೆ ನೀನು ನಡೆದುಕೊಂಡರೆ, ನನ್ನ ಐಶ್ವರ್ಯವೆಲ್ಲ ನಿನ್ನದಾಗುವದು. ನಿನ್ನ ಈ ತಾರುಣ್ಯವೂ ಸಫಲವಾಗುವದು."

ಚಂದ್ರಿಕೆ (ಕೋಪತಾಳಿ)—"ಶಾಮಣ್ಣಾ, ಇಂಥ ಹೊಲಸು ಮಾತುಗಳನ್ನು ನನ್ನೆದುರಿಗೆ ಆಡಬೇಡ; ನೀನು ಈ ಮನೆಯಲ್ಲಿ ಕಾಲಿಟ್ಟ ದಿನವೇ

ನಾನು ನಿನ್ನ ಈ ದುಷ್ಟ ಹೃದಯವನ್ನು ಕಂಡು ಹಿಡಿದಿದ್ದೇನೆ. ನಾನು ಧರ್ಮವನ್ನು ನಂಬತಕ್ಕವಳಿದ್ದೇನೆ. ಸ್ವಚ್ಛಂದವೃತ್ತಿಯನ್ನು ನಾನು ಮನಃಪೂರ್ವಕ ತಿರಸ್ಕರಿಸುತ್ತೇನೆ."

ಶಾಮನು—ಮೊದಲನೇ ದಿನವೇ ನನ್ನ ಉದ್ದೇಶವನ್ನು ಕಂಡುಹಿಡಿದಿದ್ದರೆ ನನ್ನ ಮೇಲೆ ಪ್ರೇಮ ಮಾಡುತ್ತದೇಕೆ ಬಂದೆ? ಇದರಲ್ಲಿ ನಿನ್ನದೇನಾದರೂ ಗೂಢ ಉದ್ದೇಶವಿರಬಹುದಲ್ಲವೇ?"

ಶಾಮನ ಈ ಮಾತು ಕೇಳಿ, ಚಂದ್ರಿಕೆಯು ಅತ್ಯಂತ ಕ್ರೂರದೃಷ್ಟಿಯನ್ನು ಅವನ ಮೇಲೆ ಚಲ್ಲಿದಳು. ಪತಿಭಕ್ತಿಯ ತೇಜವನ್ನೂ ಆಕೆಯ ನಿಶ್ಚಯ ಬುದ್ಧಿಯನ್ನೂ ನೋಡಿ, ಆತನು ದಂಗುಬಡಿದು ನಿಂತನು. ಇಷ್ಟು ದಿನ ತಾನು ಈಕೆಯ ವಿಷಯವಾಗಿ ಕಷ್ಟಪಟ್ಟಿದ್ದು ವ್ಯರ್ಥವೆಂದು ಭಾವಿಸಿ:-"ಚಂದ್ರಿಕೆ, ಕ್ಷಮಿಸು. ನಾನು ನಿನ್ನ ವಿಷಯವಾಗಿ ಪಾಪಬುದ್ಧಿಯನ್ನು ತಾಳಿ ಹುಚ್ಚುತನವನ್ನು ಮಾಡಿದೆನು. ದುಡ್ಡಿನಿಂದ ಎಂಥ ವಸ್ತುಗಳಾದರೂ ಸಾಧ್ಯವಾಗುವವೆಂದು ತಿಳಿದಿದ್ದೆನು. ನನ್ನ ಆ ಸಿದ್ಧಾಂತವು ತಪ್ಪಿತು. ಒಬ್ಬ ತಜ್ಞನು-ಅಗ್ನಿಯಿಂದ ಬಂಗಾರದ ಪರೀಕ್ಷೆಯೂ, ಬಂಗಾರದಿಂದ ಹೆಂಗಸಿನ ಪರೀಕ್ಷೆಯೂ, ಹೆಂಗಸಿನಿಂದ ಗಂಡಸಿನ ಪರೀಕ್ಷೆಯೂ ಆಗುವದೆಂದು ಹೇಳಿದ್ದಾನೆ. ನಿನ್ನ ಮುಂದೆ ನಾನು ಎಂದೋ ನಾಪಾಸಾಗಿದ್ದೇನೆ. ನೀನು ಮಾತ್ರ ನನ್ನನ್ನು ಪರಾಜಯಗೊಳಿಸಿದೆ. ಇನ್ನು ಮುಂದೆ ನಾನು ನಿಮ್ಮ ಮನೆಯಲ್ಲಿರುವದಿಲ್ಲ. ನಾಳಿಗೇ ಬೇರೊಂದು ಮನೆಯನ್ನು ನೋಡಿಕೊಂಡು ಹೊರಟುಹೋಗುತ್ತೇನೆ.

ಸ್ವಾಭಿಮಾನಪೂರ್ಣಳೂ ಪತಿಭಕ್ತಿಪರಾಯಣಳೂ ಆದ ಚಂದ್ರಿಕೆಗೆ ಅಲ್ಲಿ ನಿಲ್ಲಲಿಕ್ಕಾಗಲಿಲ್ಲ. ಅವಳು ಆ ಕ್ರೋಧಾವೇಶದಲ್ಲಿ ಕ್ರೂರದೃಷ್ಟಿಯಿಂದ ಶಾಮನನ್ನು ನೋಡುತ್ತ ಅಲ್ಲಿಂದ ಹೊರಟು, ತನ್ನ ಕೋಣೆಗೆ ತಲುಪಿದಳು.

---

## ೧೭

ಇತ್ತ ಲಜ್ಜಿತನಾದ ಶಾಮನು ಪೋಷಾಕು ಮಾಡಿಕೊಂಡು ಹೊರ ಹೊರಡಲು ಸಿದ್ಧನಾದನು. ರಮಾಬಾಯಿಯ ಹತ್ತರ ಹೋಗಿ, ಮಧ್ಯಾಹ್ನಕ್ಕೆ ಊಟಕ್ಕೆ ಬರಲಿಕ್ಕಾಗುವದಿಲ್ಲವೆಂದು ಹೇಳಿ, ಮನೆಯಿಂದ ಹೊರಬಿದ್ದು ನಡೆದನು.

ಮುಂದೆ ತುಸ ಹೊತ್ತಿನಲ್ಲಿ ಗೋವಿಂದರಾಯನು ಚಂದ್ರಿಕೆಯನ್ನು

ಹೂಗಿದನು. ಚಂದ್ರಿಕೆಯು ಕೋಣೆಯಲ್ಲಿ ಕುಳಿತು ಆಫೀಸಿನ ಕೆಲಸ ಮಾಡು ತ್ತಿದ್ದ ತಂದೆಯು ಬಳಿಗೆ ಬಂದಳು. ಗೋವಿಂದರಾಯನು ಚಾಳೀಸವನ್ನು ತೆಗೆದು ಬಳಿಯಲ್ಲಿರುವ ಮೇಜಿನ ಮೇಲಿರಿಸಿ ಮಾತನಾಡತೊಡಗಿದನು:— "ನಿನ್ನ ಲಗ್ನದ ಅಲಂಕಾರಗಳ ಬಾಬತು ನಾನೂರೈವತ್ತು ರೂಪಾಯಿಗಳ ಬಾಕಿಯು ಸರಾಫನ ಬಳಿಯಲ್ಲಿತ್ತು. ಅದನ್ನು ಇದುವರೆಗೂ ಮುಟ್ಟಿಸುವದ ಕ್ಯಾಗಿರಲಿಲ್ಲ. ಎಂಟು ದಿನಗಳ ಹಿಂದೆ ಸರಾಫನು ವಕೀಲರ ಮಾರ್ಫತ ನೋಟೀಸ ಕೊಡಿಸಿದ್ದನು. ನಾನು ಆ ವಕೀಲರ ಬಳಿಗೆ ಹೋಗಿ ಮಾತನಾಡಿ, ಈಗ ಇನ್ನೂರೈವತ್ತು ರೂಪಾಯಿಗಳನ್ನು ಕೊಡಬೇಕೆಂದೂ ಉಳಿದ ರೂಪಾಯಿಗಳನ್ನು ಇನ್ನು ಆರು ತಿಂಗಳ ತರುವಾಯದಲ್ಲಿ ಕೊಡಬೇಕೆಂದೂ ಗೊತ್ತುಮಾಡಿಕೊಂಡು ಬಂದೆನು. ಈ ಕರಾರಿನ ಮೇರೆಗೆ ನಿನ್ನೆಯೇ ಸರಾಫ ನಿಗೆ ರೂಪಾಯಿ ಕೊಡಬೇಕಾಯಿತು. ನನ್ನ ಬಳಿಯಲ್ಲಿ ಹಣವಿಲ್ಲದ ಮೂಲಕ ಆಫೀಸಿನ ಜಮಾ-ಖರ್ಚಿನ ರೂಪಾಯಿಗಳನ್ನು ಬಳಿಸಿ ಕೆಲಸ ಸಾಗಿಸಿದೆನು. ನಾಳೆ ರವಿವಾರ. ಸೋಮವಾರ ಆಫೀಸಿನ ವೇಳೆಯೊಳಗೆ ಆ ಹಣವನ್ನು ತುಂಬಲಿಕ್ಕೆಬೇಕು. ನಾನು ಸ್ನೇಹಿತರಲ್ಲಿ ಹಣವನ್ನು ಕೈಗಡವಾಗಿ ಕೊಡು ವಂತೆ ಕೇಳಿದೆನು. ಎಲ್ಲರೂ ನಮ್ಮಲ್ಲಿಲ್ಲವೆಂದು ಹೇಳಿಬಿಟ್ಟರು. ನಿರುಪಾಯ ನಾಗಿದ್ದೇನೆ. ನೀನೇ ಈ ಹಣವನ್ನು ಶಾಮನ ಕಡೆಯಿಂದ ನನಗೆ ಕೊಡಿಸ ಲಿಕ್ಕೆಬೇಕು; ಇಲ್ಲದಿದ್ದರೆ ನನ್ನ ಮರ್ಯಾದೆಯುಳಿಯುವಂತಿಲ್ಲ."

ಚಂದ್ರಿಕೆಯು ತ್ರಾಸಿನಿಂದಲೂ ಅಪಮಾನದಿಂದಲೂ ಕಾತರಗೊಂಡು ಹೋದಳು. ಶಾಮನೊಡನೆ ಆದ ಪ್ರಸಂಗದಲ್ಲಿ ಉಂಟಾದ ವಿಕಾರಗಳ ಸ್ಪಂದ ನವು ಇನ್ನೂ ಸಂಪೂರ್ಣವಾಗಿ ನಿಂತಿರಲಿಲ್ಲ. ಇಷ್ಟರಲ್ಲಿಯೇ ತಂದೆಯ ಈ ಆದೇಶವನ್ನು ಕೇಳಿ ಏನು ಮಾಡಬೇಕು? ಎಂಬುದು ಅವಳಿಗೆ ಸೂಚಿಸ ದಾಯಿತು. ಇದುವರೆಗೆ ಗರಿಮೆಯಿಂದ ಶಾಮನೊಡನೆ ಮಾತನಾಡಿ ಜಯ ಶಾಲಿಯಾಗಿದ್ದ ತಾನು, ಇನ್ನು ಅವನ ಬಳಿಗೆ ದುಡ್ಡಿನ ಬಿಕ್ಕೆಗೆ ಹೋಗುವದು ಮರಣಕ್ಕಿಂತಲೂ ಹೆಚ್ಚು ತಾಪದಾಯಕವೆಂದು ಅವಳಿಗೆ ಅನಿಸಿತು.

ಚಂದ್ರಿಕೆಯು ಕೆಲಹೊತ್ತು ಸುಮ್ಮನಿದ್ದು ಸ್ಥಿರತೆಯನ್ನು ತಂದುಕೊಂ ಡು "ಅಪ್ಪಾ, ಶಾಮಣ್ಣನ ಬಳಿಯಲ್ಲಿ ಕೈಗಡ ಮಾಡುವದಕ್ಕಿಂತ ನನ್ನ ಆಭರಣವನ್ನು ಒತ್ತೆಯಾಗಿಟ್ಟು ಇಲ್ಲವೆ ಮಾರಿ ಹಣದ ವ್ಯವಸ್ಥೆಯನ್ನು ಮಾಡಿಬಿಡು." ಎಂದು ಹೇಳಿದಳು.

ಗೋವಿಂದರಾಯನು ಮಗಳು ವಸ್ತುದ ಮಾತೆತ್ತುವಳೆಂಬದನ್ನು ಮೊದಲೇ ಗೊತ್ತುಮಾಡಿಕೊಂಡಿದ್ದನು; ಮತ್ತು ಅದಕ್ಕೆ ಯಾವ ಉತ್ತರ

ಕೊಡಬೇಕೆಂಬದನ್ನೂ ನಿರ್ಧರಿಸಿಕೊಂಡಿದ್ದನು. ಕಾರಣ ಅವನು ಅನುಮಾನಿಸದೆ ಅಂದದ್ದು:—"ಶಾಮನ ಹತ್ತರ ಸರಿಗೆಯನ್ನು ಒತ್ತೆಯಿಟ್ಟಿರುವೆ. ಈಗ ಇನ್ನೊಂದು ವಸ್ತುವನ್ನು ಅಡವಾಗಿಟ್ಟು ನನಗೆ ದುಡ್ಡು ತಂದು ಕೊಡು. ಶಾಮನು ಮನೆಯಲ್ಲಿರುವನಷ್ಟೇ?"

"ಇಲ್ಲ, ಈಗ ಹೊರಗೆ ಹೋದನು."

"ಬಂದ ಬಳಿಕ ವಿಚಾರಿಸು. ನನಗೆ ಸೋಮವಾರ ರೂಪಾಯಿಗಳು ಬೇಕು. ಆ ಹೊತ್ತಿಗೆ ನೀನು ನನಗೆ ರೂಪಾಯಿ ತಂದುಕೊಟ್ಟರಾಯಿತು."

ಚಂದ್ರಿಕೆಯು ತುಸ ಹೊತ್ತು ಸುಮ್ಮನಿದ್ದು ತರುವಾಯ ಬಾಡಿದ ಮೋರೆಯಿಂದ "ಅಪ್ಪಾ, ನಾನು ಹಣದ ಬಗ್ಗೆ ಶಾಮಣ್ಣನನ್ನು ಕೇಳಲಾರೆನು" ಎಂದು ಹೇಳಿದಳು.

ಗೋವಿಂದರಾಯನು ವಿಸ್ಮಯದಿಂದ "ಅದೇಕೆ? ಏನಾಯಿತು?" ಎಂದು ಕೇಳಿದನು.

ಚಂದ್ರಿಕೆಯು ಉತ್ತರ ಕೊಡಲಾರದೆ, ಕೆಳಮೋರೆ ಮಾಡಿ ನಿಂತಿದ್ದಳು.

ಗೋವಿಂದರಾಯನಿಗೆ ಸಿಟ್ಟು ಬಂದಿತು. ಅವನು "ನೀನು ಅವನನ್ನು ಏಕೆ ಕೇಳಲಾರೆ? ನಾನೇ ಸಾಲಕ್ಕಾಗಿ ಅಲೆದು ಅಲೆದು ಕಷ್ಟಪಡಬೇಕೆಂದು ನಿನ್ನ ಇಚ್ಛೆಯೋ? ನನಗಾದರೋ ಸಣ್ಣ ಮೋರೆ ಮಾಡಿಕೊಂಡು ಸಾವುಕಾರರ ಮನೆಗೆ ಹೋಗಿ ಹೋಗಿ ಬೇಜಾರವಾಗಿ ಹೋಗಿದೆ!" ಎಂದಂದನು.

ಚಂದ್ರಿಕೆಯು ಕಾತರತೆಯಿಂದ ಹೇಳಿದಳು:—"ಅಪ್ಪಾ, ನಾನು ಹಾಗೆ ಹೇಳುವದಿಲ್ಲ! ಶಾಮಣ್ಣನನ್ನು ನಾನು ಕೇಳುವದಕ್ಕಿಂತ ನೀನೇ ಕೇಳುವುದು ಒಳಿತಲ್ಲವೆ?"

"ಯಾರಿಗೆ ಯಾರು ಹೇಳಿದರೆ ಉತ್ತಮವೆಂಬದು ನಿನಗಿಂತಲೂ ನನಗೆ ಹೆಚ್ಚಾಗಿ ತಿಳಿಯುತ್ತದೆ! ನಾನು ನನ್ನ ಸ್ನೇಹಿತರಲ್ಲಿ ಹಣವನ್ನು ಕೈಗಡ ಕೇಳುವುದಕ್ಕೆ ನಿನಗೆಂದೂ ಹೇಳಿದವನಲ್ಲ!"

ಗೋವಿಂದರಾಯನ ಮಾತಿನಲ್ಲಿ ಮರೆಯಾಗಿದ್ದ ಬಾಣದ ಆಘಾತದಿಂದ ಚಂದ್ರಿಕೆಯು ವಿಮೂಢೆಯಾಗಿ ಹೋದಳು.

ತುಸ ಹೊತ್ತಿನ ಮೇಲೆ ಚಂದ್ರಿಕೆಯು ಶಾಂತಳಾಗಿ "ಅಪ್ಪಾ, ಶಾಮಣ್ಣನನ್ನು ನೀನು ಕೇಳುವದಕ್ಕಿಂತ ನಾನು ಕೇಳುವದು ಒಳ್ಳೇದೆಂದು ನೀನು ಏಕೆ ಅನ್ನುತ್ತಿರುವೆ?" ಎಂದು ಕೇಳಿದಳು.

ಗೋವಿಂದರಾಯನ ಕೋಪವು ಮತ್ತಷ್ಟು ಹೆಚ್ಚಿತು. ಅವನು "ಏಕೆ ಹೀಗೆ ಅನ್ನುತ್ತಿರುವೆನೆಂಬುದರ ವಿವರಣೆಯನ್ನು ಮಾಡಬೇಕೇ? ಶಾಮನು

ಹೊರಹೊರಡುವಾಗ ಟ್ರಂಕಿನ ಬೀಗದ ಕೈಯನ್ನು ನನ್ನ ಕೈಯಲ್ಲಿ ಕೊಡದೆ ನಿನ್ನ ಕೈಯಲ್ಲೇ ಏಕೆ ಕೊಟ್ಟು ಹೋಗುತ್ತಿರುವನೆಂಬದರ ಇಂಗಿತವನ್ನು ನೀನು ನನಗೆ ಮೊದಲು ತಿಳಿಸಿಕೊಡಬಲ್ಲೆ ಯಾ?" ಎಂದು ಕೇಳಿದನು.

ಚಂದ್ರಿಕೆಯ ಮೋರೆಯು ಶವದ ಮುಖದಂತಾಯಿತು. ಹಡೆದಪ್ಪನು ಹೀಗೆ ಮಾತನಾಡುತ್ತಿರುವದನ್ನು ನೋಡಿ ಕೋಪವೂ ಉಂಟಾಯಿತು; ಆದರೆ ಅವಳ ಮುಖದಿಂದ ಮಾತೇ ಹೊರಬೀಳಲಿಲ್ಲ.

ಗೋವಿಂದರಾಯನು ಬಡಬಡಿಸಹತ್ತಿದನು: "ಹೆಂಡತಿ-ಮಕ್ಕಳ ಸಲುವಾಗಿ ನಾನು ಬೇಸತ್ತು ಹೋಗಿದ್ದೇನೆ. ನನಗೆ ಜೀವಧಾರಣೆಯು ಅಸಹ್ಯವಾಗಿದೆ! ಮೃತ್ಯುದೇವತೆಯು ಎಂದು ಕಣ್ಣು ತೆರೆಯುವಳೋ ಏನೋ? ಯಾವಳ ಸಲುವಾಗಿ ನಾನು ಹೀಗೆ ಪೇಚಿನಲ್ಲಿ ಸಿಕ್ಕು ಪೇಚಾಡುತ್ತಿರುವೆನೋ, ಅವಳಿಗೆ ನನ್ನ ವಿಷಯದಲ್ಲಿ ಸ್ವಲ್ಪಾದರೂ ಸಹಾನುಭೂತಿಯಿಲ್ಲ! ನನ್ನನ್ನು ಸಂಕಟದಿಂದ ಪಾರುಮಾಡುವ ಸಮಯದಲ್ಲಿ ಅವಳಿಗೆ ಸ್ವಾಭಿಮಾನವು ಅಡ್ಡಿಯಾಗಿ ಬರುತ್ತಿದೆ; ಆದರೆ ಶಾಮನ ಕೈಯಿಂದ ಕೀಲಿಯ ಕೈಯನ್ನು ತಕ್ಕೊಳ್ಳುವಾಗ ಮಾತ್ರ ಆ ಸ್ವಾಭಿಮಾನವು ಎಲ್ಲಿ ಅಡಗಿ ಹೋಗಿರುವದೋ ಯಾರಿಗೆ ಗೊತ್ತು! ಮುಖ್ಯವಾಗಿ ನಾನೇ ದುರ್ದೈವಿಯು!!"

ಕೆಲಹೊತ್ತಿನ ಹಿಂದೆ ಶಾಮನೊಡನೆ ಆದ ವಾದ-ವಿವಾದವನ್ನು ಸ್ಮರಿಸಿ, ಅವುಗಳ ಪರ್ಯಾಲೋಚನೆಯಲ್ಲಿದ್ದ ಚಂದ್ರಿಕೆಯು ತಂದೆಯ ಕೆಲವು ವಾಕ್ಯಗಳನ್ನು ಕೇಳಿದಳು; ಕೆಲವನ್ನು ಕೇಳಲಿಲ್ಲ. ತಂದೆಯು ಸುಮ್ಮನಾದುದನ್ನು ನೋಡಿ "ಅಪ್ಪಾ, ನೀನು ಹೇಳಿದಂತೆ ನಾನು ಹಣದ ವ್ಯವಸ್ಥೆಯನ್ನು ಮಾಡಿಕೊಡುವೆನು; ಆಯಿತಷ್ಟೆ?" ಎಂದು ಕೇಳಿದಳು.

ಗೋವಿಂದರಾಯನು ಸಂತುಷ್ಟನಾದನು. ಅವನು ಶಾಂತಸ್ವರದಿಂದ ಚಂದ್ರಿಕೆಯನ್ನು ಸಮಾಧಾನಪಡಿಸುವದಕ್ಕೋಸುಗ ಕೆಲವು ಮಾತುಗಳನ್ನಾಡಿದನು; ಆದರೆ ಚಂದ್ರಿಕೆಯು ಆ ಕೋಪದ ಮಾತುಗಳಿಂದ ಹೊಂದಿದ್ದ ವ್ಯಥೆಗಿಂತಲೂ ಈ ಸಾಂತ್ವನೆಯ ಮಾತುಗಳಿಂದ ಹೆಚ್ಚು ವ್ಯಥೆಯನ್ನನುಭವಿಸಿದಳು. ಗೋವಿಂದರಾಯನು ಕಟ್ಟಕಡೆಗೆ ಹೇಳಿದ್ದೇನಂದರೆ:-"ತಾನು ಸಿಗಬೀಳದಂತೆ ತನ್ನಲ್ಲಿರುವ ಪ್ರತಿಯೊಂದು ವಿಧದ ಕಾರ್ಯಕಾರಕ ಶಕ್ತಿಯನ್ನು ಉಪಯೋಗಿಸಿಕೊಳ್ಳಲಿಕ್ಕೆ ಯಾವ ಅವಸ್ಥೆಯಲ್ಲಿದ್ದರೂ ಹಿಂಜರಿಯಕೂಡದು. ಇದರಲ್ಲಿ ನೀತಿಯ ಅನುಚಿತವೆಷ್ಟು ಮಾತ್ರವೂ ಇಲ್ಲ."

ಹೃದಯದಲ್ಲಿ ದಗದಗಿಸುತ್ತಿರುವ ಬೆಂಕಿಯನ್ನಿಟ್ಟುಕೊಂಡು ಚಂದ್ರಿಕೆಯು ಆ ಸ್ಥಳವನ್ನು ಬಿಟ್ಟು ನಡೆದಳು.

ರಮಾಬಾಯಿಯು ಮನೆಯ ಕೆಲಸದಲ್ಲಿ ತೊಡಗಿದ್ದಳು. ಚಂದ್ರಿಕೆಯು ಅವಳ ಬಳಿಗೆ ಹೋಗಿ, ತಂದೆಯೊಡನಾದ ಮಾತು-ಕಥೆಗಳನ್ನು ವಿಸ್ತರಿಸಿ ಹೇಳಿದಳು. ರಮಾಬಾಯಿಯು ಮಗಳ ಮಾತು ಕೇಳಿಕೊಂಡು:- "ನೀನನ್ನುವದು ತಿಳಿಯಿತು; ಆದರೆ ಮಾಡಬೇಕೇನು? ಈ ಸಂಕಟ ಸಮಯದಲ್ಲಿ ಧನದ ವ್ಯವಸ್ಥೆ ಮಾಡದಿದ್ದರೆ ನಡೆಯುವಂತಿಲ್ಲ. ಇಂದೇ ನವಕರಿ ಹೋದರೆ, ನಾಳೆ ಒಲೆಯ ಮೇಲೆ ತಪ್ಪೇಲಿ ಏರುವಂತಿಲ್ಲ! ನಾವೆಲ್ಲರೂ ಅನ್ನಾನ್ನಗತಿಕರಾಗಿ ಹೋಗುವೆವು!!"

"ಅವ್ವಾ, ಹೀಗಿದ್ದರೂ ರೂಪಾಯಿ ಕೊಡಿಸುವ ಕೆಲಸವನ್ನು ನಾನೇ ಮಾಡಬೇಕೇ? ನನಗೋಸುಗ ಸಾಲವಾಯಿತೆಂದು ಆ ಸಾಲವನ್ನು ತೀರಿಸಲಿಕ್ಕೆ ನಾನೇ ಸಿದ್ಧಳಾಗಬೇಕೇ? ಅಪ್ಪನು ಏನೇ ಅನ್ನಲಿ, ನೀನಾದರೂ ಶಾಮಣ್ಣನನ್ನು ರೂಪಾಯಿ ಕೊಡೆಂದು ಏಕೆ ಕೇಳಬಾರದು?"

ಚಂದ್ರಿಕೆಯ ಮಾತುಗಳಿಂದ ಸಿಟ್ಟಿಗೆದ್ದ ರಮಾಬಾಯಿಯು ಇಂತೆಂದಳು:—"ಚಂದ್ರಿಕೆ, ಈಗೇಕೋ ನಿನ್ನ ಅಭಿಮಾನವು ಹೆಚ್ಚಾಗುತ್ತ ನಡೆದಿದೆ. ಮಾತು ಮಾತಿಗೆ ಸ್ವಾಭಿಮಾನವನ್ನು ಮುಂದೆ ಮಾಡುತ್ತಿರುವೆ! ನಿನ್ನ ಲಗ್ನಕ್ಕಾದ ಸಾಲವನ್ನು ನೀನೇ ತೀರಿಸಬೇಕಂದು ಅಂದವರಾರು? ನಾನು ಬೇಡಿದರೆ ಆತನು ಏನಾದರೊಂದು-ನೆವನೋರಿ ಇಲ್ಲವೆಂದು ಹೇಳಬಹುದು. ಈ ಕಾರಣಕ್ಕಾಗಿಯೇ ನಾವು ಅವನಿಂದ ರೂಪಾಯಿಗಳನ್ನು ಬೇಡಿತರುವ ಕೆಲಸವನ್ನು ನಿನಗೆ ಹೇಳುತ್ತಿರುವೆವು. ಇಷ್ಟಕ್ಕಾಗಿ ನೀನು ಮನೆಯಲ್ಲಿ ಮಹಾಭಾರತವನ್ನೇ ಹೂಡಿಬಿಟ್ಟಿರುವೆ! ಹೀಗೆ ಮಾಡುವದಕ್ಕೆ ಕಾರಣವೇನು? ಶಾಮನ ಹತ್ತರ ನೀನು ರೂಪಾಯಿ ಬೇಡಿದರೆ, ನಿನ್ನ ಅಪಮಾನವಾಗುವಂತೆ ಶಾಮನು ಏನಾದರೂ ಅನ್ಯಾಯದ ವ್ಯವಹಾರ ಮಾಡಿರುವನೇನು?"

"ನಾನು ಬೇಡಿದರೆ ಹಣ ಕೊಡುವನು, ನೀವು ಬೇಡಿದರೆ ಕೊಡುವದಿಲ್ಲವೆನ್ನುವನು, ಇದೇನು ಅಂಥಿಂಥ ಅನ್ಯಾಯವೇ? ಅವ್ವಾ, ಇದಕ್ಕೂ ಹೀನವಾದ ದುರ್ವರ್ತನವನ್ನು ನೀನು ಅವನಿಂದ ಬಯಸುತ್ತಿರುವೆಯಾ?"

ರಮಾಬಾಯಿಯ ಸಿಟ್ಟು ಉಕ್ಕೇರಿತು. ಅವಳು "ನಾನು ಏನನ್ನೂ ಬಯಿಸುವದಿಲ್ಲ! ನೀನು ಮಾತ್ರ ನಾವೆಲ್ಲರೂ ಅನಾಹಾರದಿಂದ ಸತ್ತುಹೋಗಬೇಕೆಂದು ಇಚ್ಛಿಸುತ್ತಿರಬಹುದಲ್ಲವೇ!" ಎಂದು ಕೇಳಿದಳು.

"ಅವ್ವಾ,ನಾನು ಹಾಗೆಂದಿಗೂ ಬಯಿಸುವ ಸಂಭವವಿಲ್ಲ! ಯಾಕಂದರೆ, ನಾನೂ ನಿಮ್ಮೊಳಗಿನವಳೇ—ನಿಮ್ಮ ಹೊಟ್ಟೆಯ ಮಗಳೇ! ನಿಮ್ಮೆಲ್ಲರನ್ನು ಸಾಯಹೊಡೆದು ನಾನೊಬ್ಬಳು ಉಳಿದುಕೊಳ್ಳಲಿಕ್ಕೂ ಬರುವಂತಿಲ್ಲ. ಅವ್ವಾ,

ನೀನು ರೋಷದಿಂದ ಹೀಗೆ ಮಾತನಾಡಬೇಡ. ತುಸ ವಿಚಾರಮಾಡು. ಮಾತು ಮಾತಿಗೆ ನನ್ನ ಸ್ವಾಭಿಮಾನವನ್ನು ಬಲಿಗೊಡಲು ನಾನು ಸಿದ್ಧಳಾಗಲಿಯಾ?"

ರಮಾಬಾಯಿಯು ವ್ಯಂಗ್ಯಸ್ವರದಿಂದ ಇಂತು ನುಡಿದಳು:—"ಎಲ್ಲರ ಬಳಿಯಲ್ಲಿಯೂ ನಿನ್ನ ಪ್ರತಿಷ್ಠೆಯು ಹೆಚ್ಚಿ ಹೋಗಿದೆ! ಶಾಮನ ಬಳಿಯಲ್ಲಿ ಹಣಬೇಡುವದರಿಂದ ಆ ಪ್ರತಿಷ್ಠೆಯು ಹಾಳಾಗಿ ಹೋಗುವದಲ್ಲವೇ? ಚಂದ್ರಿಕೆ, ನಾನೊಂದು ಮಾತು ಹೇಳುತ್ತೇನೆ. ಅನೇಕರಿಗಿಂತಲೂ ಶಾಮನು ನಿನ್ನವನು; ಶಾಮನ ಮೇಲೆ ನಡೆಯುವ ನಿನ್ನ ಅಧಿಕಾರವು ಅನೇಕರ ಮೇಲೆ ನಡೆಯದು, ಎಂಬದನ್ನು ಮರೆಯದಿರು."

ರಮಾಬಾಯಿಯ ಮಾತುಗಳಲ್ಲಿ ಸ್ವಾಮಿರಾಯನ ಅಸ್ಪಷ್ಟವಾದ ಉಲ್ಲೇಖವಿದ್ದುದು ಚಂದ್ರಿಕೆಗೆ ಹೊಳೆಯಿತು. ಅವಳು ಕ್ರೋಧದಿಂದಲೂ ಅಪಮಾನದಿಂದಲೂ ಗಾಯಗೊಂಡು:—"ಅವ್ವಾ, ನೀನೆನ್ನುತ್ತಿರುವದು ಸರಿಯಲ್ಲ! ಶಾಮಣ್ಣನು ಅನೇಕರಿಗಿಂತಲೂ ನನ್ನವನಲ್ಲ. ಅಂತೆಯೇ ನಾನು ಅವನ ಮೇಲೆ ಅಧಿಕಾರ ನಡೆಸ ಹೋಗುವದು ಅಪಮಾನದಾಯಕವೆಂದು ಭಾವಿಸಿದ್ದೇನೆ; ಆದರೆ--ಹಡೆದವ್ವನಾಗಿಯೂ ನೀನು ನನ್ನ ದುಃಖವನ್ನು ತಿಳಿಯಲಿಲ್ಲವೆಂದ ಬಳಿಕ ಉಪಾಯವಿಲ್ಲ! ನಿಮ್ಮಿಬ್ಬರ ಇಚ್ಛೆಯಂತೆ ಹಣವನ್ನು ತಂದು ಕೊಡುವೆನು. ಸಮಾಧಾನವಾಯಿತಷ್ಟೆ?" ಚಂದ್ರಿಕೆಯು ತಾಯಿಯ ಉತ್ತರವನ್ನಪೇಕ್ಷಿಸದೆ ಹೊರಟು ಹೋದಳು.

ಮಗಳನ್ನು ಕರೆದು ನಾಲ್ಕು ಸಮಾಧಾನದ ಮಾತುಗಳನ್ನಾಡಿ ಕಳುಹಬೇಕೆಂದೂ, ಶಾಮನ ಹತ್ತರ ತಾನೇ ರೂಪಾಯಿಗಳನ್ನು ಬೇಡಬೇಕೆಂದೂ ರಮಾಬಾಯಿಯ ಮನಸ್ಸಿನಲ್ಲಿ ಒಮ್ಮೆ ಉಂಟಾಯಿತು; ಆದರೆ 'ತಾನು ಶಾಮನನ್ನು ವಿಚಾರಿಸಲು, ಅವನು ಇಲ್ಲವೆಂದು ಹೇಳಿದ ಬಳಿಕ, ಮುಂದೆ ಚಂದ್ರಿಕೆಯು ಬಾಯ ತೆರೆದರೂ ಹಣವು ಸಿಗದಂತಾಗುವದು. ಹೀಗೆ ಆದರೆ ಕೆಲಸವೇ ಕೆಟ್ಟು ಹೋಗುವದು' ಎಂದು ಆಲೋಚಿಸಿದ ರಮಾಬಾಯಿಯು, ಮಗಳನ್ನು ಸಮಾಧಾನ ಪಡಿಸುವ ಉದ್ಯೋಗಕ್ಕೆ ಹೋಗಲಿಲ್ಲ. ಮೇಲಾಗಿ 'ಚಂದ್ರಿಕೆಯು ಶಾಮನ ಕಡೆಯಿಂದ ರೂಪಾಯಿಗಳನ್ನು ತಕ್ಕೊಂಡು ಬರುವೆನೆಂದು ಹಡೆದವರ ಮುಂದೆ ಹೇಳಿ ಬಂದಿದ್ದ ಬಳಿಕ, ತಾನು ತಡೆಯುವದೂ ತರವಲ್ಲವೆ'ಂದು ಅವಳು ಭಾವಿಸಿರಬಹುದು

---

# ೧೮

ಇಂದು ಚಂದ್ರಿಕೆಗೆ ಸಮಾಧಾನವೇ ಇರಲಿಲ್ಲ; ಹೃದಯಸ್ಥ ಬೆಂಕಿಯು ಕ್ರಮಶಃ ಹೊತ್ತಿ ಅವಳ ದೇಹವನ್ನೆಲ್ಲ ವ್ಯಾಪಿಸಿ ಬಿಟ್ಟಿತು. ಚಂದ್ರಿಕೆಯು ಚಿರಕಾಲವೂ ಪೋಷಿಸಿಟ್ಟುಕೊಂಡಿದ್ದ ಯಾವ ಸಂಸ್ಕಾರದ ಬಲದಿಂದ ಶಾಮ ನೊಡನೆ ವಾದಿಸಿ ಜಯಶಾಲಿನಿಯಾಗಿದ್ದಳೋ, ಆ ಸಂಸ್ಕಾರವು ಎಲ್ಲಿ ಅಡಗಿ ಕೊಂಡಿತೋ ಏನೋ! ಈ ಸಂಸಾರದಲ್ಲಿ ಅರ್ಥವೇ ಪ್ರಬಲವಾದುದೆಂದೂ, ಉಳಿದೆಲ್ಲವುಗಳೂ ದುರ್ಬಲವಾದವುಗಳೆಂದೂ ಅವಳಿಗೆ ಬೋಧೆಯಾಯಿತು; ಯಾಕಂದರೆ, ಅರ್ಥಾಭಾವದಲ್ಲಿ ಮಾತೃಹೃದಯದಲ್ಲಿಯ ಮಗಳ ಮಂಗಳ ಕಾಮನೆಯೂ ಮಾಯವಾಗಿ ಹೋದುದನ್ನು ಅವಳು ಅನುಭವಿಸಿದ್ದಳು.

ಅಭಾವವೆಂಬುದೇ ಕಷ್ಟಕರವು; ಅದರಲ್ಲೂ ಧನಾಭಾವವು ಎಲ್ಲವುಗಳಿ ಗಿಂತ ಹೆಚ್ಚು ದುಃಖಪ್ರದವೆಂದು ಚಂದ್ರಿಕೆಗೆ ಅನಿಸಿತು. ಭಕ್ತಿ, ಪ್ರೇಮ, ಸ್ನೇಹ, ಕರುಣೆ ಮೊದಲಾದವುಗಳ ಅಭಾವವನ್ನು ಸಹಿಸಬಹುದು; ಆದರೆ ದುಡ್ಡಿನ ಕೊರತೆಯನ್ನು ಮಾತ್ರ ಸಹಿಸಲಾಗದು! ಪತಿಪ್ರೇಮದ ಅಭಾವದಿಂದ ಅವಳ ಮೂರು ವರುಷಗಳು ಕಳೆದಿದ್ದವು; ಆದರೆ ದುಡ್ಡಿನ ಅಭಾವದ ಮೂಲಕ ಮೂರು ದಿನಗಳನ್ನು ಕಳೆಯುವದೂ ಕಠಿಣವಾಗಿತ್ತು.

ಹಸಿವೆಯೆಂಬುದು ಕಸುವಿನ ರಾಕ್ಷಸವೇ ಸರಿ! ಅನ್ನವು ಸಿಕ್ಕರೆ ಅನ್ನ ವನ್ನು ಜೀರ್ಣಿಸುವದು; ಇಲ್ಲವಾದರೆ ಮನುಷ್ಯನ ದೇಹವನ್ನೂ ಮನಸ್ಸನ್ನೂ ಜೀರ್ಣಿಸುವದು! ಪುಣ್ಯ, ಪ್ರೇಮ, ಸಂಯಮ ಮೊದಲಾದವುಗಳನ್ನು ಬಿಟ್ಟ ರೂ ನಡೆಯುವದು; ಆದರೆ ಅನ್ನವನ್ನು ಬಿಟ್ಟರೆ ನಡೆಯದು! ರಮಾಬಾಯಿ ಯು ಒಲೆಯ ಮೇಲೆ ತಪ್ಪೇಲಿ ಏರದಿರುವಂತಹ ಸಂಕಟವು ಬೇರೊಂದಿಲ್ಲ ವೆಂದು ಹೇಳಿದ್ದಳು! 'ಮಾನವರ ದೇಹದಲ್ಲಿ ಪಾಪಪೂರ್ಣವಾದ ಈ ಪಾಕ ಸ್ಥಳವಿಲ್ಲದಿದ್ದರೆ ಎಷ್ಟು ಒಳಿತಾಗುತ್ತಿತ್ತಲ್ಲ!' ಎಂದು ಚಂದ್ರಿಕೆಯು ಅಂದು ಕೊಂಡಳು.

ಶಾಮನು ಅಲೆದು-ಅಲೆದು, ದಣಿದು, ಬೇಸತ್ತು ಸಾಯಂಕಾಲದ ತರು ವಾಯ ಮನೆಯನ್ನು ಸೇರಿದನು. ಬಳಿಕ ಅರ್ಥತಾಸಿನ ಮೇಲೆ ಚಂದ್ರಿಕೆಯ ಬಳಿಗೆ ಬಂದು ಇಂತು ಹೇಳಿದನು:—"ಮನೆಯನ್ನು ಬಾಡಿಗೆಯಿಂದ ಹಿಡಿ ದಿದ್ದೇನೆ. ಅಡಿಗೆಯ ಆಚಾರಿಯನ್ನೂ ಗೊತ್ತು ಮಾಡಿದ್ದೇನೆ. ನಾಳೆ ಸಾಯಂಕಾಲದಲ್ಲಿ ಈ ಮನೆಯನ್ನು ಬಿಟ್ಟುಕೊಡುವೆನು" ತರುವಾಯ

ಅವನು ಕಿಸೆಯೊಳಗಿಂದ ಒಂದು ಕಾಗದವನ್ನು ಹೊರದೆಗೆದು ಚಂದ್ರಿಕೆಯ ಕೈಯಲ್ಲಿ ಕೊಟ್ಟು ಇಂತೆಂದನು: "ಇದು ಕುಬೇರನ ಬಳಿಯಲ್ಲಿದ್ದ ಪ್ರಾಮಿಸರಿ ನೋಟು. ಕುಬೇರನು ಯಾವತ್ತೂ ಹಣ ಮುಟ್ಟಿತೆಂದು ಭರಪಾಯಿ ಹಾಕಿ ಕೊಟ್ಟಿದ್ದಾನೆ. ಇದನ್ನು ನೀನು ಕಕ್ಕನಿಗೆ ಕೊಡು. ಅವನು ಅನುಕೂಲತೆಯ ಮೇರೆಗೆ ನನ್ನ ಸಾಲವನ್ನು ತೀರಿಸಲಿ. ಅವಸರವೇನೂ ಇಲ್ಲ."

"ಅಪ್ಪನು ನಿನ್ನ ಸಾಲವನ್ನು ತೀರಿಸದಿದ್ದರೆ?"

"ಸಾಲವನ್ನು ಮುಟ್ಟಿಸಿಕೊಳ್ಳುವ ಕಾಯಿದೇಶೀರ ಉಪಾಯವನ್ನು ನಾನು ಇಟ್ಟುಕೊಂಡೇ ಇಲ್ಲ. ಬೇಕಾದರೆ ತೀರಿಸಲಿ, ಇಲ್ಲವಾದರೆ ಬಿಡಲಿ; ಅವನು ನನ್ನ ಹಣವನ್ನು ಮುಳುಗಿಸಿದರೂ ನನಗೆ ಯಾವ ಕೊರತೆಯೂ ಉಂಟಾಗದು"

"ಶಾಮಣ್ಣಾ, ನೀನು ಇಷ್ಟೊಂದು ತ್ಯಾಗವನ್ನು ಸ್ವೀಕರಿಸಿದ್ದೇಕೆ? ಇದರ ವಿನಿಮಯ ರೂಪದಲ್ಲಿ ನಾವು ನಿನಗೆ ಏನೂ ಕೊಡಲಿಲ್ಲವಲ್ಲ!"

ಶಾಮನು ನಕ್ಕು ಹೇಳತೊಡಗಿದನು:—"ತಂಗೀ, ಯಾವುದನ್ನು ನೀನು ಗ್ರಹಿಸಲಾರೆಯೋ, ಯಾವುದನ್ನು ನೀನು ನಂಬಲಾರೆಯೋ ಆ ಸಂಗತಿಯನ್ನು ಕೇಳಿಕೊಳ್ಳುವದರಿಂದ ಪ್ರಯೋಜನವೇನು? ಈ ಜಗತ್ತಿನಲ್ಲಿ ನಾನಾ ವಿಧದ ಸ್ವೇಚ್ಛಾಚಾರಿಗಳಿದ್ದಾರೆ, ಹುಚ್ಚರಿದ್ದಾರೆ. ನಾನೂ ಅವರಲ್ಲೊಬ್ಬನೆಂದು ತಿಳಿದು ಕೊಂಡುಬಿಡು!"

ಚಂದ್ರಿಕೆಯು ಕ್ಷಣಕಾಲ ಸುಮ್ಮನಿದ್ದು, ಬಳಿಕ ಪ್ರಾಮಿಸರಿ ನೋಟನ್ನು ಶಾಮನ ಕೈಯಲ್ಲಿ ಕೊಟ್ಟು ಹೇಳಿದ್ದು:—"ಅಣ್ಣಾ, ಈ ವ್ಯಾಪಾರದಲ್ಲಿ ನನ್ನನ್ನು ತೊಡಕಿಸಬೇಡ. ನಿನ್ನ ಇಚ್ಛೆಯ ಮೇರೆಗೆ ನೀನೇ ಅಪ್ಪನೊಡನೆ ಮಾತನಾಡಿಕೊಳ್ಳಬಹುದು. ನಾನು ಈಗ ನಿನ್ನ ಬಳಿಯಲ್ಲಿ ಒಂದು ಭಿಕ್ಷೆಯನ್ನು ಬೇಡಿಕೊಳ್ಳಬೇಕಾಗಿದೆ."

"ಭಿಕ್ಷೆಯೇ! ಅದಾವುದು?"

ಚಂದ್ರಿಕೆಯು ಸೆರಗಿನಲ್ಲಿ ಕಟ್ಟಿಕೊಂಡಿದ್ದ ನತ್ತನ್ನು ಹೊರದೆಗೆದು ಶಾಮನ ಮುಂದಿರಿಸಿ:—"ನೀನು ಈ ಅಲಂಕಾರವನ್ನು ಅಡವಿಟ್ಟುಕೊಂಡು ನನಗೆ ಇನ್ನೂರೈವತ್ತು ರೂಪಾಯಿಗಳನ್ನು ಕೊಡಬೇಕು. ನಿನ್ನಲ್ಲಿಲ್ಲವಾದರೆ ಬೇರೆಯವರಿಂದ ಕೊಡಿಸು. ನನಗೆ ಹಣದ ಅಡಚಣಿಯು ಬಹಳವಿದೆ" ಎಂದು ಅಂದಳು,

ಶಾಮನು ಮುಗುಳು ನಗೆ ನಕ್ಕು:—"ಚಂದ್ರಿಕೆ, ಇದು ಬಿಕ್ಕೆಯಲ್ಲ; ಬಿಕ್ಕೆಯ ಬೇಡುವದೂ ಅಲ್ಲ, ತಕ್ಕೊಳ್ಳುವದೂ ಅಲ್ಲ! ಇದು ಸಾವುಕಾರಿಕೆಯ

ವ್ಯವಹಾರವು" ಎಂದು ಹೇಳಿ, ತುಸ ಹೊತ್ತು ಸುಮ್ಮನೆ ಕುಳಿತು ಬಳಿಕ ಅಂದದ್ದು:—"ಆಗಲಿ. ನಿನ್ನ ಇಚ್ಛೆಯಂತೆ ಹಣವನ್ನು ಕೊಡುತ್ತೇನೆ. ಅದರ ಬದಲು ಈ ಅಲಂಕಾರವನ್ನು ನನ್ನ ಬಳಿಯಲ್ಲಿಟ್ಟುಕೊಳ್ಳದಿದ್ದರೆ ನಡೆಯದೇನು?"

ಚಂದ್ರಿಕೆಯು ಕಾತರತೆಯಿಂದ ಹೇಳಿದಳು:—"ಅಣ್ಣಾ, ಬೇಡ. ನನ್ನ ಬೇಡಿಕೆಯನ್ನು ಅಲ್ಲಗಳೆಯಬೇಡ! ನೀನು ಒತ್ತೆಯ ಇಟ್ಟುಕೊಂಡು ಹಣ ಕೊಟ್ಟರೂ, ನನ್ನ ಮೇಲೆ ಸಾಮಾನ್ಯ ಉಪಕಾರ ಮಾಡಿದಂತಾಗುವದಿಲ್ಲ"

ಶಾಮನು ನಗುತ್ತ ಹೇಳತೊಡಗಿದನು:-"ತಂಗೀ, ಈ ಸಂಸಾರದಲ್ಲಿ ಎಲ್ಲೆಲ್ಲಿಯೂ ತಪ್ಪುತಿಳುವಳಿಕೆಯು ಪಸರಿಸಿದೆ! ನೀನು ನನ್ನನ್ನು ಇಂದಿನವರೆಗೂ ತಪ್ಪುತಿಳುವಳಿಕೆಯಿಂದಲೇ ನೋಡುತ್ತ ಬಂದಿರುವೆ! ನಾನು ನಿನ್ನ ಮೇಲೆ ಉಪಕಾರ ಮಾಡಬೇಕೆಂದು ಇಚ್ಛಿಸಿದವನಲ್ಲ-ಈಗಲೂ ಆ ಇಚ್ಛೆ ನನಗಿಲ್ಲ. ಉಪಕಾರದ ಹೊರೆಯನ್ನು ಹೊರಿಸಿ, ಕಕ್ಕನನ್ನೂ-ಕಕ್ಕಿಯನ್ನೂ ಕೈಯಲ್ಲಿ ತಕ್ಕೊಳ್ಳುವದು ನನ್ನ ಗುರಿಯಾಗಿತ್ತು. 'ಯಾಕಂದರೆ, ಬೇಟೆಯನ್ನು ಕಷ್ಟವಿಲ್ಲದೆ ಹಿಡಿಯುಲೋಸುಗ ಅವರು ಮುಖ್ಯಸಾಧನಗಳಂತಿದ್ದರು.'

"ಅಣ್ಣಾ, ನಾನು ನಿನ್ನನ್ನು ಸರಿಯಾಗಿ ತಿಳಿದುಕೊಳ್ಳಲಿಲ್ಲವೆಂಬದನ್ನು ಒಪ್ಪಿಕೊಳ್ಳುತ್ತೇನೆ. ಆದರೂ ನನ್ನ ಈ ಬಿನ್ನಹವನ್ನು ಅಮಾನ್ಯ ಮಾಡಬೇಡ. ಈ ಅಲಂಕಾರವು ನಿನ್ನ ಬಳಿಯಲ್ಲಿರಲಿ. ಸದ್ಯಕ್ಕೆ ನಿನ್ನಲ್ಲಿ ಹಣವಿಲ್ಲದಿದ್ದರೆ, ಈ ಅಲಂಕಾರವನ್ನು ಮಾರಿ ತಂದುಕೊಡು."

"ಆಗಲಿ. ಆಭರಣವು ನನ್ನ ಹತ್ತರವೇ ಇರಲಿ" ಎಂದಂದು, ತನ್ನ ಕೋಣೆಗೆ ಹೋಗಿ ಹಣವನ್ನು ತಕ್ಕೊಂಡು ಬಂದು, ಚಂದ್ರಿಕೆಯ ಕೈಯಲ್ಲಿ ಕೊಟ್ಟು ಅಂದದ್ದು—"ತಂಗೀ, ನೀನು ಉಪಕಾರ, ವಿನಿಮಯ ಮೊದಲಾದ ಶಬ್ದಗಳನ್ನು ಪಯೋಗಿಸಿ ಮಾತನಾಡುತ್ತಿರುವೆ. ನೀನು ನನ್ನ ಮುಂಜಾವಿನ ಅಪರಾಧವನ್ನು ಯಾವ ಉಪಕಾರವನ್ನು ತೀರಿಸುವದಕ್ಕೋಸುಗ ಮತ್ತು ಯಾವುದರ ವಿನಿಮಯ ಸ್ವರೂಪವಾಗಿ ಕ್ಷಮಿಸಿದೆಯೆಂಬದನ್ನು ಹೇಳಿಕೊಡಬಲ್ಲೆಯೋ? ತಂಗೀ, ಈ ಸಂಸಾರದಲ್ಲಿ ಅಂಗಡಿಕಾರಿಕೆ, ಬಡ್ಡಿಯ ವ್ಯವಹಾರ ಈ ಎರಡೇ ವೃತ್ತಿಗಳಿಲ್ಲ; ಇದಕ್ಕಿಂತಲೂ ಹೆಚ್ಚಿನ ಎಷ್ಟೋ ವೃತ್ತಿಗಳಿವೆ."

ಚಂದ್ರಿಕೆಯು ಮಾತ ಬಳೆಸಲಿಚ್ಛಿಸಲಿಲ್ಲ. ಅವಳು ಶಾಮನ ಅನುಜ್ಞೆಯ ಪಡೆದು, ತಂದೆಯ ಬಳಿಗೆ ಹೋದಳು. ಶಾಮನು ಕೊಟ್ಟಿದ್ದ ನೋಟುಗಳನ್ನು ತಂದೆಯ ಮುಂದಿರಿಸಿ, 'ಇನ್ನೂರೈವತ್ತು ರೂಪಾಯಿಗಳಿವೆ' ಎಂದು ಹೇಳಿದಳು. ಗೋವಿಂದರಾಯನು ಆನಂದಾತಿಶಯದಿಂದ 'ಇಂದೇ ತಂದೆಯಾ?

ಇದಕ್ಕಾಗಿಯೇ ನಾನು ನಿನಗೆ ಈ ಕೆಲಸವನ್ನು ಮಾಡಹೇಳಿದೆನು. ವಸ್ತ್ರ-ಒಡವೆಗಳನ್ನೇನಾದರೂ ಅಡವಾಗಿಟ್ಟೆಯಾ?'' ಎಂದು ಕೇಳಿದನು.

ಕೋಣೆಯಿಂದ ಹೊರಬೀಳುವದರಲ್ಲಿದ್ದ ಚಂದ್ರಿಕೆಯು "ನತ್ತನ್ನು ಒತ್ತಿಯ ಇಟ್ಟು ತಂದಿರುವೆನು.'' ಎಂದು ಹೇಳಿ ಮುಂದೆ ಸಾಗಿದಳು. ಗೋವಿಂದರಾಯನ ಉಬ್ಬು ಕೆಲಮಟ್ಟಿಗೆ ಕಡಿಮೆಯಾಯಿತು.

ಚಂದ್ರಿಕೆಯು ತನ್ನ ಕೋಣೆಗೆ ಹೋಗಿ, ಹಾಸುಗೆಯ ಮೇಲೆ ಬಿದ್ದುಕೊಂಡು ಮುಂಡಿ ವಿಹೀನವಾದ ಮೇಕೆಯಂತೆ ಚಟಪಡಿಸಹತ್ತಿದಳು.

ಚಂದ್ರಿಕೆಯು ಆ ರಾತ್ರಿಯಲ್ಲಿ ಬಹಳ ಹೊತ್ತಿನವರೆಗೆ ಎದ್ದು ಕುಳಿತು, ಹಲವು ವಿಧವಾಗಿ ವಿಚಾರಿಸಿ, ಕಡೆಗೆ ಪತಿಗೆ ಪತ್ರವನ್ನು ಬರೆಯತೊಡಗಿದಳು:

"ಶಿರಸಾಸ್ಟಾಂಗ ನಮಸ್ಕಾರಪೂರ್ವಕ ನಿವೇದನ,

ನಾನು ಇಂತಹ ದೊಡ್ಡ ವಿಪತ್ತಿನಲ್ಲಿ ಸಿಗಬೀಳದಿದ್ದರೆ, ಈ ಜೀವನದಲ್ಲಿ ನಿಮಗೆ ಪತ್ರ ಬರೆಯುವ ಸಾಹಸವನ್ನೆಂದೂ ಮಾಡುತ್ತಿರಲಿಲ್ಲ. ಇಂದು ನಾನು ಲಜ್ಜಾ--ಸಂಕೋಚ -ಮಾನ--ಅಪಮಾನಗಳನ್ನು ಲಕ್ಷಿಸುವಂತಿಲ್ಲ; ಯಾಕಂದರೆ, ಮರಣಕ್ಕಿಂತಲೂ ಗುರುತರವಾದ ಗಂಡಾಂತರವು ನನ್ನ ದುರಿನಲ್ಲಿ ನಿಂತು ಪರಿಹಾಸ ಮಾಡುತ್ತಿದೆ!

ಶಾಮರಾಯ ದೇಸಾಯಿ ಎಂಬವನು ನಮ್ಮ ದೂರ ಸಂಬಂಧಿಕನಾದ ಅಪ್ಪನು; ತನಗೆ ನಿಮ್ಮ ಪರಿಚಯವಿದೆಯೆಂದು ಇವನು ಹೇಳಿದ್ದಾನೆ; ಮತ್ತು ಈಗೆರಡು-ಮೂರು ದಿನಗಳ ಹಿಂದೆ ಇವನಿಗೆ ನಿಮ್ಮ ಭೆಟ್ಟಿಯಾಗಿತ್ತಂತೆ. ಈ ಶಾಮಣ್ಣನೇ ಕೆಲವು ದಿವಸಗಳಿಂದ ನನ್ನ ಆಯುಷ್ಕ್ರಮಣದ ಮಾರ್ಗದಲ್ಲಿ ಕಂಟಕಸ್ವರೂಪನಾಗಿ ನಿಂತುಕೊಂಡಿದ್ದಾನೆ.

ಶಾಮಣ್ಣನಿಗೋಸುಗ ನಾನು ತುಸವೂ ಭಯಪಡುವದಿಲ್ಲ. ತಿರಸ್ಕಾರದೊಡನೆ ಅವನನ್ನು ಉಪೇಕ್ಷಿಸುವ ಶಕ್ತಿಯು ನನ್ನಲ್ಲಿದೆಯೆಂಬುದರ ಅರಿವು ನನಗುಂಟು; ಆದರೆ ಬೇರೆ ಕೆಲವು ಕಾರಣಗಳ ಮೂಲಕ ನನ್ನ ಜೀವನವು ದುಸ್ಸಹವಾಗಿ ಹೋಗಿದೆ!

ಶಾಮಣ್ಣನು ಶ್ರೀಮಂತನು, ಅಪ್ಪನು ಬಡವನು; ಸಾಲಗಾರನು. ಶಾಮಣ್ಣನು ಬೇಡಿದಾಗ ಬೇಡಿದಷ್ಟು ಧನಸಹಾಯವನ್ನು ಮಾಡಿ ಅಪ್ಪನನ್ನು ಅಂಕೆಯಲ್ಲಿಟ್ಟುಕೊಂಡಿದ್ದಾನೆ. ಈ ಸಂದರ್ಭದಲ್ಲಿ ಅಪ್ಪನು ನನ್ನನ್ನು ಚಾವಿಯಂತೆ ನಡೆಸಿಕೊಳ್ಳುತ್ತಿದ್ದಾನೆ; ಯಾಕಂದರೆ, ಶಾಮಣ್ಣನು ನಾನು ಬೇಡಿದ ಕೂಡಲೆ ದುಡ್ಡು ಕೊಡುವನು ಕಾರಣ ಪ್ರತಿಸಾರೆಯೂ ನಾನೇ ಶಾಮಣ್ಣನ ಬಳಿಗೆ ಹೋಗಿ, ರೂಪಾಯಿ ಕೊಡೆಂದು ಕೇಳಬೇಕಾಗುತ್ತಿದೆ.

ಶಾಮಣ್ಣನು ಮುಕ್ತಹಸ್ತವಾಗಿ ಧನವನ್ನು ಕೊಡುತ್ತಿರುವುದರಲ್ಲಿ ದುರುದ್ದೇಶ ಪ್ರೇರಿತನಾಗಿರುವನೆಂಬದು ಅಪ್ಪನಿಗೆ ಗೊತ್ತಿದೆ; ನನಗೆ ಗೊತ್ತಿದೆ; ಅವ್ವನಿಗೂ ಗೊತ್ತಿದೆ; ಆದರೂ ನಾವೆಲ್ಲರೂ ನಿರುಪಾಯರಾಗಿ ಹೋಗಿದ್ದೇವೆ!

ಹೀಗೆ ಕ್ರಮಶಃ ನನ್ನನ್ನೇ ನಾನು ಮಾರಿಕೊಳ್ಳುತ್ತಿರುವದನ್ನರಿತ ನನಗೆ ಹುಚ್ಚು ಹಿಡಿದಂತಾಗಿ ಹೋಗಿದೆ! ಶಾಮಣ್ಣನ ದುಡ್ಡು ಎತ್ತಿ ಹಾಕಿ, ಯಾವದೊಂದು ಬಗೆಯಿಂದ ಅವನಕೈವಶವಾಗದೆ ಎಚ್ಚರದಿಂದಿರುವುದು, ಶಾಮಣ್ಣನ ಅಂಕೆಗೊಳಗಾಗಿ ಹೋಗುವದಕ್ಕಿಂತ ಕೆಟ್ಟದೆಂದು ನನಗೆ ಅನಿಸುತ್ತಿದೆ. ನಾನು ಸರಿಯಾಗಿರುವೆನೆಂದು ಅಪ್ಪನು ತಿಳಿದಿದ್ದಾನೆ. ನಾನು ಒಳಿತಾಗಿರುವೆನೆಂದು ಅವ್ವನೂ ಹೇಳುತ್ತಾಳೆ. ನಾನು ಸುಖದಿಂದಿರುವೆನೆಂದು ಶಾಮಣ್ಣನು ಭಾವಿಸಿದ್ದಾನೆ; ಆದರೆ ನಾನು ಮಾತ್ರ ನನ್ನ ಅವಸ್ಥೆಯು ಚನ್ನಾಗಿಲ್ಲವೆಂದು ನಿರ್ಧರಿಸಿಕೊಂಡಿದ್ದೇನೆ. ಸತಿಯರಿಗೆ 'ಆತ್ಮಮರ್ಯಾದೆಯನ್ನು ಪಣವಾಗಿ ಹಚ್ಚಿ ಜೂಜಾಡುವಂತಹ ಮಹಾಪಾತಕವು ಮತ್ತೊಂದಿರದೆಂದು ನಾನು ನಂಬಿದ್ದೇನೆ!

ಶಾಮಣ್ಣನು ನನ್ನ ಮೇಲೆ ಬಲಾತ್ಕಾರ ಮಾಡುವದಿಲ್ಲ. ಕೇವಲ ತ್ಯಾಗದಿಂದ ನನ್ನನ್ನು ಕೈವಶಮಾಡಿಕೊಳ್ಳಲಿಚ್ಛಿಸುತ್ತಾನೆ. ಇದರಿಂದ ನನಗೇನು ಲಾಭ? ನರಕದ ಮಾರ್ಗವು ಪ್ರಶಸ್ತವೂ ಪರಿಷ್ಕಾರವೂ ಆದರೂ ವಾಂಛಿತವಲ್ಲವಷ್ಟೆ?

ಸ್ವರ್ಗ-ನರಕಗಳಿಲ್ಲ, ಪಾಪ-ಪುಣ್ಯಗಳಿಲ್ಲ, ಧರ್ಮಾ-ಧರ್ಮಗಳಿಲ್ಲ. ಈಶ್ವರನು ಸಹ ಇಲ್ಲವೆಂದೂ, ಕೇವಲ ಸಮಾಜ ರಕ್ಷಣೆಗೋಸುಗ ಮನುಷ್ಯರಿಂದ ನಿರ್ಮಿಸಲ್ಪಟ್ಟ ಕುಶಲೋಪಾಯಗಳೆಂದೂ ಶಾಮಣ್ಣನು ಹೇಳಿದನು. ನಾನು ನಿನ್ನ ಈ ಮಾತನ್ನು ಸರ್ವಥಾ ಸಮ್ಮತಿಸಲಾರನೆಂದು ಅವನಿಗೆ ಸ್ಪಷ್ಟವಾಗಿ ಹೇಳಿಬಿಟ್ಟೆನು.

ಶಾಮಣ್ಣನು ಆಮರಣಪರ್ಯಂತರವಾಗಿ ನನ್ನ ಎಲ್ಲ ಭಾರವನ್ನು ಹೊರಲು ಸಿದ್ಧನಾಗಿದ್ದಾನೆ. ಅವನು ನನಗೋಸುಗ ತನ್ನ ಸರ್ವಸ್ವವನ್ನು ಸೂರೆಗೊಳ್ಳಬಲ್ಲನೆಂದು ನನ್ನ ವಿಶ್ವಾಸವಿದೆ; ಆದರೆ ನನಗೆ ನನ್ನೀ ನಂಬುಗೆಯೇ ಎಲ್ಲಕ್ಕೂ ದೊಡ್ಡದಾದ ಗಂಡಾಂತರವಾಗಿದೆ. ನಾನು ಸತಿಯು—ನಾನು ಸಾಧ್ವಿಯು—ನಾನು ಧರ್ಮವನ್ನು ನಂಬುತ್ತೇನೆ. ಈಶ್ವರನಲ್ಲಿ ವಿಶ್ವಾಸವುಳ್ಳವಳಾಗಿದ್ದೇನೆ—ನಾನು ಸಂಭಾವಿತ ಗೃಹಸ್ಥನ ಮಗಳು—ಸಭ್ಯಗೃಹಸ್ಥರ ಹೆಂಡತಿಯು—ಹೀಗಿದ್ದೂ ನಾನು ನನ್ನ ಯಾವ ಪಾಪಕ್ಕೋಸುಗ ಶಾಮಣ್ಣನ ಪಾಪ-ಕಥೆಯನ್ನು ಕೇಳಬೇಕಾಗಿ ಬಂದಿರಬಹುದು?

ತ್ರಿಶಂಕುವಿನ ಸ್ವರ್ಗದಂತೆ ಭೂಮ್ಯಾಕಾಶಗಳೆರಡನ್ನೂ ಕಾಣದೆ ಚಡ

ಸಡಿಸುತ್ತ ಆಯುಷ್ಯವನ್ನು ಕ್ರಮಿಸುವದು ನನಗೆ ತೀರ ಅಸಹ್ಯವಾಗಿದೆ! ಮನಸ್ಸಿನಲ್ಲಿ ಸ್ವರ್ಗದ ಕಲ್ಪನೆಯನ್ನಿಟ್ಟುಕೊಂಡು, ಕಣ್ಣುಗಳಿಂದ ನರಕದ ನೋಟವನ್ನು ನೋಡುವದು ಅತ್ಯಂತ ತಾಪದಾಯಕವು!

ಅಂತೆಯೇ ನಾನಿಂದು ಈ ದೊಡ್ಡ ಕುತ್ತಿನಲ್ಲಿ ಮಾನ-ಅಪಮಾನ-ಅಭಿಮಾನಗಳೆಲ್ಲವನ್ನು ಮರೆತು ನಿಮಗೆ ಶರಣಾಗತಳಾಗಿದ್ದೇನೆ. ನೀವು ನನ್ನನ್ನು ರಕ್ಷಿಸಿರಿ. ನೀವು ನನ್ನ ಪತಿಗಳು. ನನ್ನನ್ನು ಸಂರಕ್ಷಿಸುವದು—ಅದರಲ್ಲೂ ಈ ತರದ ಸಂಕಟಸಮಯದಲ್ಲಿ – ನಿಮ್ಮ ಕರ್ತವ್ಯವು. ನಿಮ್ಮ ಹೆಂಡತಿಯೆಂಬ ಕಾರಣದಿಂದ ನನಗೆ ದೊರೆತಿದ್ದ ಯಾವತ್ತು ಅಧಿಕಾರವನ್ನು ನಾನಿಂದು ಸಂಪೂರ್ಣವಾಗಿ ಉಪಯೋಗಿಸಿಕೊಳ್ಳಲು ಇಚ್ಛಿಸುತ್ತೇನೆ. ಇದರ ಮೇಲೆಯೂ ನೀವು ಉದಾಸೀನರಾದರೆ, ನಿಮಗೆ ಪ್ರತ್ಯವಾಯ ದೋಷವು ಘಟಿಸದಿರದು.

ನಾನು ಇಂದು ರವಿವಾರ ರಾತ್ರಿಯ ಹನ್ನೆರಡು ಗಂಟೆಗೆ ತಲೆಬಾಗಿಲವನ್ನು ತೆರೆದು ಮಾರ್ಗದಲ್ಲಿ ಬಂದು ನಿಂತುಕೊಳ್ಳುವೆನು. ನೀವು ಆ ಮೊದಲೇ ಬಂದು ಅಲ್ಲಿರಬೇಕು; ಹಾಗು ನನ್ನನ್ನು ನಿಮ್ಮ ಇಚ್ಛೆಯಿದ್ದಲ್ಲಿಗೆ ಕರೆದೊಯ್ಯಬೇಕು. ಆ ಸಮಯದಲ್ಲಿ ಶಾಮಣ್ಣನೂ ಅಲ್ಲಿ ನನಗೋಸುಗ ಕಾಯ್ದಿರುವನು. ಸ್ವರ್ಗವು ಅದೃಷ್ಟದಲ್ಲಿರದಿದ್ದರೆ, ಅನಿರ್ವಾಹದಿಂದ ನರಕದಲ್ಲಿ ಪ್ರವೇಶ ಮಾಡಬೇಕಾಗುವದು.

ಧರ್ಮದಲ್ಲಿ ವಿಶ್ವಾಸವುಳ್ಳ ನಾನು ಒಂದಿಲ್ಲೊಂದು ದಿನ ನಿಮ್ಮನ್ನು ಹೊಂದಿಯೇ ಹೊಂದುವೆನೆಂಬ ಮನವರಿಕೆಯುಳ್ಳವಳಾಗಿದ್ದೇನೆ. ಪರಲೋಕದಲ್ಲಿ ನಂಬಿಗೆಯುಳ್ಳ ನಾನು ಇದುವರೆಗಿನ ಯಾವತ್ತೂ ತಾಪಗಳನ್ನು ಒಂದು ವಿಧದಿಂದ ಸಹಿಸುತ್ತ ಬಂದಿದ್ದೇನೆ. ನೀವು ನನ್ನ ಈ ವಿಶ್ವಾಸವನ್ನು ನಿರರ್ಥಕಗೊಳಿಸಬೇಡಿರಿ.

ಇನ್ನು ನಾನು ಹೇಳುವದಾಯಿತು. ನೀವು ನನ್ನ ಪತಿಗಳಾದುದರಿಂದ ಪ್ರಕಟ ರೀತಿಯಿಂದ ಯಾವತ್ತೂ ಸಂಗತಿಯನ್ನು ನಿಮಗೆ ತಿಳುಹಿದ್ದೇನೆ; ಹಾಗು ನನ್ನ ಜೀವನ ಮರಣಗಳ ಪ್ರಶ್ನೆಯನ್ನು ನಿಮಗೊಪ್ಪಿಸಿ ನಿಶ್ಚಿಂತಳಾಗಿದ್ದೇನೆ.

ಇತಿ ತಮ್ಮ ಚರಣಾಶ್ರಯ ಪ್ರಾರ್ಥಿನಿ,

"ಶ್ರೀಮತಿ ಚಂದ್ರಿಕೆ."

ಚಂದ್ರಿಕೆಯು ಇದರದೇ ಇನ್ನೊಂದು ಪ್ರತಿಯನ್ನು ತಯಾರಿಸಿ, ಪಾಕೀಟಿನಲ್ಲಿ ಹಾಕಿ, ಮೇಲ್ವಿಳಾಸವನ್ನು ಬರೆದು ತೆಗೆದಿಟ್ಟು, ಮತ್ತೆ ಹಾಸುಗೆಯ ಮೇಲೆ ಬಿದ್ದುಕೊಂಡಳು.

ಚಂದ್ರಿಕೆಯು ಮರುದಿನ ಮುಂಜಾನೆ ಒಂದು ಪತ್ರವು ಅಂಚೆಯ ಮುಖಾಂತರವಾಗಿ ಮುಟ್ಟುವಂತೆ ವ್ಯವಸ್ಥೆ ಮಾಡಿದಳು. ಮತ್ತೊಂದನ್ನು ಒಗೆಯುವ ಅರಿವೆಗಳನ್ನು ಒಯ್ಯಬಂದ ಅಗಸರವಳ ಕೈಯಲ್ಲಿ ಕೊಟ್ಟು, ಐದು ರೂಪಾಯಿಗಳ ಪಾರಿತೋಷಕವನ್ನು ಕೊಟ್ಟು, ಪತ್ರವು ಪತಿಯ ಕೈಯಲ್ಲಿಯೇ ಬೀಳಬೇಕೆಂದು ಬಜಾಯಿಸಿ ಕಳುಹಿದಳು. ಮುಂದೆ ನಾಲ್ಕು ತಾಸುಗಳ ಮೇಲೆ ಅಗಸರವಳು ಬಂದು ಪತ್ರವನ್ನು ಸ್ವಾಮಿರಾಯನಿಗೆ ಮುಟ್ಟಿಸಿದೆನೆಂದೂ, ಅದನ್ನವರು ಸಮಕ್ಷಮ ಓದಿಕೊಂಡರೆಂದೂ ಹೇಳಿದ ಬಳಿಕ ಚಂದ್ರಿಕೆಗೆ ಬಹುಮಟ್ಟಿಗೆ ಸಮಾಧಾನವೆನಿಸಿತು.

ಶಾಮನು ಇಳಿಹೊತ್ತಿನಲ್ಲಿ ತನ್ನ ಹೊಸ ವಾಸಸ್ಥಳಕ್ಕೆ ಹೊರಡುವದಕ್ಕೆ ಸಿದ್ಧನಾದನು. ಗೋವಿಂದರಾಯನೂ ರಮಾಬಾಯಿಯೂ ಬೇಡಬೇಡವೆಂದು ಬಹಳವಾಗಿ ಹೇಳಿಕೊಂಡರು. ಆದರೂ ಅವನು ಒಡಂಬಡಲಿಲ್ಲ. ಬಳಿಕ ಅವನು ಚಂದ್ರಿಕೆಯ ಬಳಿಗೆ ಬಂದನು.

ಚಂದ್ರಿಕೆಯು ತನ್ನ ಕೋಣೆಯಲ್ಲಿ ಚಿಂತಾಕ್ರಾಂತಳಾಗಿ ಕುಳಿತಿದ್ದಳು. ಶಾಮನು ಮನೆ ಬಿಟ್ಟು ಹೊರಡುವದಕ್ಕೆ ಅಪ್ಪಣೆಯನ್ನು ಕೇಳಿಕೊಂಡನು. ಚಂದ್ರಿಕೆಯು ಪ್ರಾಮಿಸರಿ ನೋಟನ್ನು ಬೇಡಿ ತಕ್ಕೊಂಡು:—"ಅಣ್ಣಾ, ನಾನು ಇನ್ನೊಂದು ಮಾತನ್ನು ನಿನಗೆ ಕೇಳಿಕೊಳ್ಳಬೇಕಾಗಿದೆ." ಎಂದಳು.

"ಅದೇನು? ಹೇಳು."

"ನನಗೆ ಈ ಮನೆಯಲ್ಲಿರುವದು ಬಹಳ ಬೇಸರವನ್ನುಂಟು ಮಾಡಿದೆ. ನೀನು ಕೆಲವು ದಿನಗಳ ಮಟ್ಟಿಗಾದರೂ ನಿನ್ನಮನೆಯಲ್ಲಿ ತಂಗಿ ಎಂಬ ಭಾವನೆಯನ್ನು ಜಾಗ್ರತವಾಗಿಟ್ಟುಕೊಂಡು ನನಗೆ ಸ್ಥಳಕೊಡಬಲ್ಲೆಯಾ?"

"ಪುನಃ ಅಗ್ನಿಯೊಡನೆ ಚೆಲ್ಲಾಟವಾಡಲಿಕ್ಕೆ ಬಯಸುವೆಯಾ? ನಾರಿಯರು ಘೃತಕುಂಭಸಮರೆಂತಲೂ, ಪುರುಷರು ತಪ್ತಾಂಗಾರಸಮರೆಂತಲೂ ಬುದ್ಧಿವಂತರು ಹೇಳುತ್ತಾರೆ."

"ಜಾಣರ ಈ ಮಾತುಗಳು ಕೇವಲ ದುರ್ಬಲಪ್ರಕೃತಿಯವರಿಗೋಸ್ಕರ ಮಾತ್ರ! ತಾನು ಸರಿಯಾಗಿದ್ದರೆ ಸೂಳಿಗೇರಿಯಲ್ಲೂ ಮನೆ ಕಟ್ಟಲಿಕ್ಕೆ ಅಡ್ಡಿಯಿಲ್ಲವೆಂಬದೊಂದು ಗಾದೆಯ ಮಾತಿದೆಯಷ್ಟೆ? ಮೇಲಾಗಿ ತಂಗಿಯೆಂಬ ಭಾವನೆಯನ್ನು ಜಾಗ್ರತವಾಗಿಟ್ಟುಕೊಂಡೇ ನೀನು ನನಗೆ ಆಶ್ರಯಕೊಡಬೇಕೆಂದು ನಾನು ನಿನಗೆ ಮೊದಲೇ ಹೇಳಿಬಿಟ್ಟದ್ದೇನೆ. ಹೀಗೆ ಮಾಡುವದು ಸಾಧ್ಯವಿದ್ದರೆ ಮಾತ್ರ ನೀನು ನನ್ನನ್ನು ಕರೆದೊಯ್ಯುಹುದು; ಇಲ್ಲವಾದರೆ ಬೇಡ."

"ಇದಕ್ಕೆ ಕಕ್ಕನೂ ಕಕ್ಕಿಯೂ ಒಪ್ಪಬಹುದೇ?

"ನಾನು ಅವರನ್ನು ವಿಚಾರಿಸದೆಯೇ ಮನೆಯಿಂದ ಹೊರಬೀಳಬೇಕೆಂದಿದ್ದೇನೆ!"

ಶಾಮನು ಕೆಲ ಹೊತ್ತು ಚಂದ್ರಿಕೆಯ ಮುಖವನ್ನು ಮಿಕಿಮಿಕಿ ನೋಡುತ್ತಿದ್ದು:—"ಸಾಧ್ಯವೆ?" ಎಂದು ಕೇಳಿದನು.

"ಸಾಧ್ಯವಿರದೆ ಏನು? ಇಂದು ರಾತ್ರಿಯಲ್ಲಿ ಆರು ತಾಸಿನ ಸುಮಾರಿಗೆ ನಾನು ತಲೆಬಾಗಿಲವನ್ನು ತೆರೆದು, ಮಾರ್ಗದಲ್ಲಿ ಬಂದು ನಿಂತುಕೊಳ್ಳುವೆನು. ನೀನು ಆ ಮೊದಲೇ ಇಲ್ಲಿಗೆ ಬಂದಿರು."

"ಕಕ್ಕನೂ ಕಕ್ಕಿಯೂ ಏನೆನ್ನಬಹುದು? ಜನರು ಏನಂದಾರು?"

"ನಾನು ಈಗ ತಾಯಿತಂದೆಗಳನ್ನು ಲೆಕ್ಕಿಸುವಂತಿಲ್ಲ. ಜನರು ಏನೆನ್ನುವರು, ಏನೆನ್ನಲಿಕ್ಕಿಲ್ಲ? ಎಂಬದರ ಗೊಡವೆ ನಮಗೆ ಬೇಡ! ಮುಖ್ಯವಾಗಿ ನಾವು ಮನಃಪೂರ್ವಕವಾಗಿ ನಿರ್ದುಷ್ಟರಿದ್ದರೆ ತೀರಿತು."

'ಮೃಗವು ಯಾವ ಉದ್ದೇಶವನ್ನಿಟ್ಟುಕೊಂಡು ಬೆನ್ನ ಹತ್ತಿ ಬಂದರೂ ಬೇಟೆಗಾರನಿಗೆ ಹಾನಿಯಿಲ್ಲ' ಎಂದು ಭಾವಿಸಿದ ಶಾಮನು "ಚಂದ್ರಿಕೆ, ಆಶ್ರಯ ಕೊಡುವದಕ್ಕೆ ನನ್ನದೇನೂ ಅಡ್ಡಿಯಿಲ್ಲ. ನೀನು ಹೇಳಿದಂತೆ ಇಂದು ರಾತ್ರಿಯ ಹನ್ನೆರಡು ಗಂಟೆಗೆ ಬರಬಲ್ಲೆನು; ಆದರೆ ನೀನು ಮಾತ್ರ ಅಂದಂತೆ ಮಾಡಲಿಕ್ಕೆ ತಪ್ಪಬೇಡ ಕಂಡೆಯಾ." ಎಂದು ಅಂದನು.

ಶಾಮನು ಚಂದ್ರಿಕೆಯ ಅಪ್ಪಣೆ ಪಡೆದು, ತನ್ನ ಸಾಮಾನುಗಳನ್ನೆಲ್ಲ ಬಂಡಿಯಲ್ಲಿ ಹಾಕಿಸಿಕೊಂಡು, ಗೊತ್ತು ಮಾಡಿಟ್ಟುಕೊಂಡಿದ್ದ ಹೊಸ ವಾಸ ಸ್ಥಳದ ಕಡೆಗೆ ನಡೆದನು.

——



## ೧೯

ಶಾಮನು ಹೋದ ಬಳಿಕ ಕೆಲವು ಹೊತ್ತಿನ ವರೆಗೆ ಚಂದ್ರಿಕೆಯು ಹುಚ್ಚು ಹಿಡಿದವರಂತೆ ಸುಮ್ಮನೆ ಕುಳಿತು ಬಿಟ್ಟಳು. ಈ ವರೆಗೆ ತಾನು ಏನು ಮಾಡಿದೆನು? ಇನ್ನು ಮುಂದೆ ಮಾಡಬೇಕಾದುದೇನು? ಎಂಬುದನ್ನು ವಿಚಾರಿಸಿಕೊಳ್ಳುವ ಶಕ್ತಿಯು ಅವಳಲ್ಲಿ ಉಳಿದಿರಲಿಲ್ಲ. ಆಮಂತ್ರಣ ಹೊಂದಿ ಇನ್ನು ಕೆಲವು ತಾಸುಗಳಲ್ಲಿ ಆಗಮಿಸಬಹುದಾಗಿದ್ದ ಆ ಕಠಿಣ ಪ್ರಸಂಗವನ್ನು ಕುರಿತು ಆಲೋಚಿಸುವ ಸಾಹಸವೂ ಅವಳಿಗಿರಲಿಲ್ಲ. ಅವಳು ತಾನೇ ತನ್ನ ಜೀವನ ಹಾಗು ಮರಣಗಳಿಗೆ ಔತಣ ಕೊಟ್ಟಿದ್ದಳು—ಅದೃಷ್ಟವಲ್ಲೇನಿದೆ? ನಿಮಂತ್ರಿತರಾದವರಲ್ಲಿ ಆರನ್ನು ಆಶ್ರಯ ಮಾಡಬೇಕಾದೀತು, ಎಂಬದು ಯಾರಿಗೆ ಗೊತ್ತು?

ಆ ಬಿಕ್ಕಟ್ಟಿನ ಪ್ರಸಂಗವು ಬರುವದಕ್ಕಿರುವ ಅಲ್ಪಾವಕಾಶವು ಕಡಿಮೆಯಾಗುತ್ತ ನಡೆದಂತೆ ಚಂದ್ರಿಕೆಯು ಅಸ್ವಾಭಾವಿಕವಾದ ವ್ಯಗ್ರತೆಯನ್ನು ಅನುಭವಿಸತೊಡಗಿದಳು. ಆಗಮಿಸಬಹುದಾಗಿದ್ದ ಆ ಸಮಯವನ್ನು ಸಮಾಧಾನದಿಂದ ಕಾಯ್ದುಕೊಂಡಿರುವ ಧೈರ್ಯವು ಅವಳಿಗಿರಲಿಲ್ಲ. ರಾತ್ರಿಯಲ್ಲಿ ನೆರಳ ನೋಡಿ ಬೆದರಿದ ಮನುಷ್ಯನು ಭಯನಿವಾರಣೆಗೋಸ್ಕರ ಓಡಿ ಹೋಗಿ ಆ ಛಾಯೆಯನ್ನು ಸ್ಪರ್ಶಮಾಡಿ ನೋಡಿ ನಿಶ್ಚಿಂತನಾಗುವಂತೆ, ಚಂದ್ರಿಕೆಯ ಯಾವದೇ ರೀತಿಯಿಂದಾಗಲಿ ಆದಷ್ಟು ಬೇಗನೆ ಆ ಸಮಯವನ್ನು ತಂದುಕೊಂಡು, ತನ್ನ ಭಯಾವಹವಾದ ಭವಿಷ್ಯತ್ತಿನ ಅದೃಷ್ಟಮೂರ್ತಿಯನ್ನು ಅವಲೋಕಿಸಿ ಸಮಾಧಾನಪಡಬೇಕೆಂದು ಮಾಡಿದಳು! ಇನ್ನು ಕೆಲವು ಹೊತ್ತಿನಲ್ಲಿ ಸಮುದ್ರದಲ್ಲಿ ಹಾರಿಕೊಳ್ಳಲೇ ಬೇಕಿರುವಾಗ, ಇರುವ ಅಲ್ಪ ಸಮಯವನ್ನು ದಂಡೆಯಲ್ಲಿ ನಿಂತುಕೊಂಡು ಕಳೆಯುವದರಿಂದ ಪ್ರಯೋಜನವೇನು? ಮಾನವನ ಮನಸ್ಸಿನಲ್ಲಿ ಭಯಾವಹದ ವಿಷಯಕ್ಕಿರುವ ದುರತಿಕ್ರಮಣೀಯವಾದ ಆಕರ್ಷಣಶಕ್ತಿಯನ್ನು ಚಂದ್ರಿಕೆಯು ಅನುಭವಿಸತೊಡಗಿದ್ದಳು.

ಹರಿಯು ಕೆಳಮನೆಯಲ್ಲಿದ್ದನು. ಅವನು ಕೆಲಹೊತ್ತಿನ ನಂತರ ಮೇಲೆ ಬರುತ್ತಲೇ, ಚಂದ್ರಿಕೆಯು ಆವನನ್ನು ಕರೆದು, ಆದರದಿಂದ ತೊಡೆಯ ಮೇಲೆ ಕುಳ್ಳಿರಿಸಿಕೊಂಡು, ಮಮತೆಯಿಂದ ಮೈಮೇಲೆ ಕೈಯಾಡಿಸಿ, ಪ್ರೀತಿಯಿಂದ ಮಾತನಾಡಿದಳು. ಬಳಿಕ ಹರಿಯನ್ನು ಸಮೀಪದಲ್ಲಿ ಕುಳ್ಳಿರಿಸಿ, ಎದ್ದು ಹೋಗಿ, ಇದುವರೆಗೂ ಹರಿಯು ಆಗ್ರಹದಿಂದ ಬೇಡಿದ್ದರೂ ಕೊಡ

ಲಿಕ್ಕಾಗದಿರುವ ಒಡವೆಗಳನ್ನೆಲ್ಲ ತಂದು ಆವನಿಗೆ ಕೊಟ್ಟಳು. ಹರಿಯು ಈ ವಸ್ತುಗಳು ತನಗೆ ದೊರೆತಾವೆಂದು ಭಾವಿಸಿದವನಲ್ಲ. ಹೀಗೆ ಅಸಂಭವನೀಯ ವಾದ ಸಂಗತಿಯು ಘಟಿಸಿದುದನ್ನು ಅನುಭವಿಸಿದ ಹರಿಯು ಚಕಿತನಾಗಿ "ಅಕ್ಕಾ, ಇವೆಲ್ಲವುಗಳನ್ನು ನನಗೇಕೆ ಕೊಟ್ಟೆ? ಇವು ನಿನಗೆ ಬೇಡವೇ?" ಎಂದು ಕೇಳಿದನು.

"ತಮ್ಮಾ, ಇನ್ನು ನಾನು ದೊಡ್ಡವಳಾದೆನು. ಆಟದ ಸಾಮಾನು ಗಳಿಂದ ನನಗೆ ಉಪಯೋಗವಿಲ್ಲ. ನೀನು ಇವುಗಳನ್ನು ತಕ್ಕೊಂಡು ಆಟ ವಾಡು; ಆದರೆ ನೀನು ಇಂದು ಈ ಜೀನಸುಗಳನ್ನು ಅವ್ವನಿಗಾಗಲಿ ಅಪ್ಪನಿ ಗಾಗಲಿ ತೋರಿಸಕೂಡದು. ತಿಳಿಯಿತೇ?"

"ಯಾಕೆ?"

ಚಂದ್ರಿಕೆಯು ಕಾರಣವನ್ನು ಹೇಳಿಕೊಡದೆ "ತಮ್ಮಾ ಯಾಕೆಂದು ಕೇಳಬಾರದು. ನಾನು ಹೇಳುತ್ತಿರುವೆನೆಂದ ಬಳಿಕ ನೀನು ಅದನ್ನು ನಡಿಸಲೇ ಬೇಕು. ತೋರಿಸಬೇಡವೆಂದು ಹೇಳಿದರೆ, ಬಿಟ್ಟುಬಿಟ್ಟರಾಯಿತು" ಎಂದು ಅಂದಳು.

"ಹಾಗಾದರೆ ನಾಳೆ ಮುಂಜಾನೆ ತೋರಿಸಲಿಯಾ?"

"ಆಗಲಿ, ತೋರಿಸು" ಚಂದ್ರಿಕೆಯು ಉಕ್ಕಿ ಬರುತ್ತಿರುವ ಅಶ್ರುಗಳು ತಮ್ಮನ ಕಣ್ಣಿಗೆ ಬೀಳಬಾರದೆಂದು ಕಿಟಕಿಯ ಬಳಿಗೆ ಹೋಗಿ ನಿಂತು, ಹೊರಗೆ ನೋಡಹತ್ತಿದಳು.

ಚಂದ್ರಿಕೆಯು ರಾತ್ರಿಯಲ್ಲಿ ಗೋವಿಂದರಾಯನೊಡನೆ ತುಸ ಮಾತ ನಾಡಿದಳು; ಆದರೆ ತಾಯಿಯೊಡನೆ ಮಾತನಾಡುವ ಪ್ರಸಂಗವು ಬರುತ್ತಲೆ ಅವಳ ಕುತ್ತಿಗೆಯು ಬಿಗಿದು ಬಂತು. ಕಣ್ಣುಗಳು ಅಶ್ರುಪೂರ್ಣವಾದವು. ಅವಳು ಮಾತುಗಳನ್ನಾಡಲಾರದವಳಾಗಿ ಆ ಸ್ಥಳವನ್ನು ಬಿಟ್ಟು ನಡೆದಳು. ತಾಯಿಯು ಮಗಳ ಈ ಸ್ಥಿತಿಯನ್ನು ಅಂಶಮಾತ್ರವಾಗಿ ಅರಿತು ಮಗಳನ್ನು ಮಾತನಾಡಿಸುವ ಪ್ರಯತ್ನಮಾಡಿದಳು; ಆದರೆ ಚಂದ್ರಿಕೆಯು ತಿರುಗಿ ತಾಯಿಯ ಬಳಿಗೆ ಹೋಗದೆ "ಅವ್ವಾ, ನಿನ್ನ ಈ ಪಾಪಿಷ್ಠಳಾದ ಮಗಳನ್ನು ಕ್ಷಮಿಸು. ಇನ್ನು ನನಗೆ ನಿನ್ನೊಡನೆ ಮಾತನಾಡುವ ಪ್ರಸಂಗವು ನನ್ನ ಜೀವಮಾನದಲ್ಲಿ ದೊರೆಯದಿದ್ದರೂ ಇರಬಹುದು! ಆದರೆ ಇಂದು ನಾನು ನಿನ್ನೊಡನೆ ಮಾತನಾಡಲಿಕ್ಕೆ ಅಸಮರ್ಥಳಾಗಿದ್ದೇನೆ!" ಎಂದು ಮನಸ್ಸಿ ನಲ್ಲಿಯೇ ಅಂದುಕೊಂಡು ತನ್ನ ಕೋಣೆಯನ್ನು ಹೊಕ್ಕಳು.

ಚಂದ್ರಿಕೆಯು ಎಲ್ಲರೂ ಮಲಗಿದ ಬಳಿಕ, ತನ್ನ ಕೋಣೆಯ ಬಾಗಿಲ ವನ್ನಿಕ್ಕಿ ಭದ್ರ ಪಡಿಸಿದಳು. ಎದ್ದು ಕುಳಿತು ತಾಯಿಗೊಂದು, ತಂದೆ ಗೊಂದು ಹೀಗೆ ಎರಡು ಪತ್ರಗಳನ್ನು ಬರೆದಳು. ಎಲ್ಲಿಗೆ ಹೋಗುವೆನು, ಯಾರ ಸಂಗಡ ಹೋಗುವೆನು? ಎಂಬದನ್ನೇನೂ ಈ ಪತ್ರಗಳಲ್ಲಿ ಕಾಣಿಸಿರ ಲಿಲ್ಲ. ಏಕೆ ಹೋಗುವೆನೆಂಬದನ್ನು ಮಾತ್ರ ಉಲ್ಲೇಖಿಸಿದ್ದಳು—ಈ ಜೀವ ನವು ಅಸಹ್ಯವಾಗಿದೆ! ಆದುದರಿಂದ ಈ ಜೀವನದ ಮಮತೆಯನ್ನು ಬಿಟ್ಟು ಹೊರಟಿದ್ದೇನೆ—ತರುವಾಯ ಕ್ಷಮಾಪ್ರಾರ್ಥನೆ ಹಾಗು ನಮಸ್ಕಾರ. ಈ ವಿಷಯದಲ್ಲಿ ಅವಳು ಬರೆದಿದ್ದುದೇನಂದರೆ:—"ನಾನು ನಿನ್ನ ಇಚ್ಛೆಯಂತೆ ನಡೆದುಕೊಂಡು ನಿನ್ನನ್ನಾಶ್ರಯಿಸಿರಲಿಕ್ಕೆ ಸಮರ್ಥಳಾಗಲಿಲ್ಲ. ಈ ವಿಷಯ ದಲ್ಲಿ ನಾನೇ ಅಪರಾಧಿನಿಯು. ಕ್ಷಮೆದೋರು; ಹಾಗು ನನ್ನ ಕೊನೆಯ ಪ್ರಣಾಮಗಳನ್ನು ಪ್ರೀತಿಯಿಂದ ಸ್ವೀಕರಿಸು."

ಪತ್ರಗಳನ್ನಿಟ್ಟು ಅವುಗಳ ಮೇಲೆ ದೌತಿಯನ್ನು ಹೇರಿ, ಗಡಿಯಾರ ವನ್ನು ನೋಡಿಕೊಂಡು ಬಂದಳು. ಹನ್ನೊಂದೂವರೆ ಗಂಟೆಯಾಗಿತ್ತು. ಕೇವಲ ಇನ್ನು ಅರ್ಧ ತಾಸು ಮಾತ್ರ ಉಳಿದಿತ್ತು.

ಚಂದ್ರಿಕೆಯ ದೇಹದಲ್ಲಿ ವಿದ್ಯುತ್ಪ್ರವಾಹವು ಹರಿದುಹೋದಂತಾಯಿತು. ಕೂಡಲೆ ಅವಳ ಶರೀರವೆಲ್ಲ ಅವಸನ್ನವಾಗಿ ಹೋಯಿತು. ಆ ತಡಿತ್ಪ್ರವಾಹ ದಿಂದ ದೇಹದೊಳಗಿನ ರಕ್ತವೆಲ್ಲ ಒಂದೆಡೆಯಲ್ಲಿ ಒಂದುಗೂಡಿ ಹೆತ್ತು, ಬರ್ಫ ವಾದಂತೆ ಚಂದ್ರಿಕೆಗೆ ಭಾಸವಾಯಿತು. ಮೈಯು ಭಾರವಾಗಿ, ತಂಡಿ ಸುಟ್ಟಿ ನಡುಗತೊಡಗಿತು.

ಚಂದ್ರಿಕೆಯು ದೇಹವು ಅಕ್ಷಮವಾಗಿ ಹೋಗುವದೆಂಬ ಆಶಂಕೆ ಯಿಂದ ಎದ್ದು ಮೆಲ್ಲಮೆಲ್ಲನೆ ಕೋಣೆಯಲ್ಲಿ ಆಡ್ಡಾಡತೊಡಗಿದಳು. ಎರಡೂ ಕಾಲುಗಳಲ್ಲಿ ಯಾರೋ ಕಲ್ಲುಗಳನ್ನು ಕಟ್ಟಿ ಹೋಗಿರುವಂತೆ ಅವಳಿಗೆ ಬೋಧೆಯಾಯಿತು. ಅವಳು ಅತಿ ಕಷ್ಟದಿಂದ ಕಾಲುಗಳನ್ನು ಎಳೆದೆಳೆದು ಹಾಕಿ, ತನ್ನ ಗತಿಶಕ್ತಿಯು ಸಂಪೂರ್ಣವಾಗಿ ಅಳಿದಿಲ್ಲವೆಂಬ ಮನವರಿಕೆ ಯನ್ನು ಮಾಡಿಕೊಂಡಳು.

ಬಳಿಕ ಚಂದ್ರಿಕೆಯು ಕೋಣೆಯಿಂದ ಹೊರಬಿದ್ದು, ಹೊರಗಿರುವ ಗಡಿಯಾರವನ್ನು ನೋಡಿದಳು. ಹನ್ನೆರಡಕ್ಕೆ ಹತ್ತು ನಿಮಿಷ ಕಡಿಮೆ ಯಿತ್ತು. ಆಗ ಅವಳು ತನ್ನಲ್ಲಿಯೇ ಅಂದುಕೊಂಡದ್ದು:—"ಇನ್ನು ವಿಲಂಬ ಮಾಡಿ ಉಪಯೋಗವಿಲ್ಲ. ದೇಹದ ಈ ದುರ್ಬಲಾವಸ್ಥೆಯಲ್ಲಿ ಕೆಳಗಿಳಿದು ಹೊರಬೀಳಲಿಕ್ಕೆ ಎಷ್ಟು ವೇಳೆ ಬೇಕಾದೀತೆಂಬದು ಗೊತ್ತಾಗುವಂತಿಲ್ಲ!"

ಹೊರಹೊರಟ ಚಂದ್ರಿಕೆಯು ತಿರುಗಿ ನಿಂತು ತನ್ನ ಕೋಣೆಯ ಕಡೆ ನೋಡಿದಳು. ಯಾವುದನ್ನು ನೋಡಬೇಕಾಗಿತ್ತೋ ನೋಡಿದೆನೇನು ಎಂಬದರ ಅರಿವೇ ಅವಳಿಗಿರಲಿಲ್ಲ. ಮನೆಯನ್ನು ತುಂಬಿಕೊಂಡಿದ್ದ ಸಾಮಾನ ಗಳು ಮಾತ್ರ ಅವಳ ಕಡೆಗೆ ಉದಾಸ ದೃಷ್ಟಿಯಿಂದ ನೋಡುತ್ತಿದ್ದವು.

ಚಂದ್ರಿಕೆಯು ಕೋಣೆಯಿಂದ ಸೋಪಾನದ ಬಳಿಗೆ ಬರುವ ಮಾರ್ಗ ದಲ್ಲಿ ಗೋವಿಂದರಾಯನು ಮಲಗಿಕೊಳ್ಳುವ ಕೋಣೆಯಿತ್ತು. ಚಂದ್ರಿಕೆಯು ಈ ಕೋಣೆಯ ಬಳಿಯಲ್ಲಿ ನಿಂತು, ಮಲಗಿದ ತಾಯಿ-ತಂದೆಗಳಿಗೆ ಅವನ ಮಸ್ತಕಳಾಗಿ ನಮಸ್ಕರಿಸಿದಳು. ತರುವಾಯ ಅವಳು ಬೇಡಿಯಿಂದ ಬದ್ಧ ನಾದ ಕೈದಿಯಂತೆ ಪಾವಟಿಗೆಗಳ ಕಟಾಂಜನವನ್ನು ಹಿಡಿದುಕೊಂಡು, ಕಾಲ ನ್ನೆತ್ತಿಳಿಯುತ್ತ ಸೋಪಾನಗಳನ್ನು ದಾಟಿದಳು. ಇನ್ನು ತಲೆಬಾಗಿಲದ ಬಳಿ ಹೋಗಿ, ಅಗಳಿಯನ್ನು ತೆಗೆದು ಮಾರ್ಗ ಮಾಡಿಕೊಂಡು ಹೊರಬೀಳು ದೊಂದು ಉಳಿದಿತ್ತು. ಚಂದ್ರಿಕೆಯು ಅಗಳಿಗೆ ಕೈಯಿಕ್ಕುತ್ತಲೆ, ಅವಳ ತಲೆ ತಿರುಗಿ ಹೋಯಿತು. ಚೈತನ್ಯವು ಲುಪ್ತವಾಗಿ ಹೋಗುವದೋ ಏನೋ ಎಂಬಂತೆ ಅವಳಿಗೆ ಅನಿಸಿತು. ಅವಳು ಕೆಲಹೊತ್ತು ಸ್ಥಿರವಾಗಿ ನಿಂತು ಕೊಂಡು, ಕಡಿಮೆಯಾಗುತ್ತ ನಡೆದಿದ್ದ ಶಾರೀರಿಕ ಶಕ್ತಿಯನ್ನು ಪುನಃ ತನ್ನ ತಂದುಕೊಳ್ಳಲಿಕ್ಕೆ ಶಕ್ತಿಮೀರಿ ಪ್ರಯತ್ನ ಮಾಡಿದಳು. ಅವಳು ತನ್ನಲ್ಲಿಯೆ ಇಂತು ಅಂದುಕೊಂಡಳು:—"ಯಾವದೇ ರೀತಿಯಿಂದಾಗಲಿ ಈ ದೇಹವನ್ನು ಬಾಗಿಲದ ಹೊರಗೆ ಎಳೆದೊಯ್ಯಲೇಬೇಕು! ಬಳಿಕ ನನ್ನ ಹಣೆಯ ಬರೆಹದ ಸ್ವರ್ಗವೇ ಇರಲಿ, ನರಕವೇ ಇರಲಿ! ಇನ್ನು ನನ್ನಿಂದ ಈ ಬಾಗಿಲದ ಒಳಗೆ ಲಿಕ್ಕೆ ಆಗುವಂತಿಲ್ಲ!"

———



## ೨೦

**

ರಾಜಮಾರ್ಗವು ಜನಶೂನ್ಯವೂ ನಿಸ್ತಬ್ಧವೂ ಆಗಿತ್ತು. ದಾರಿಯ ಎಡ ಬಲ ಬದಿಗಳಲ್ಲಿ ಗ್ಯಾಸಿನ ದೀಪಗಳು ಉರಿಯುತ್ತಿದ್ದವು; ಮೇಲ್ಭಾಗದಲ್ಲಿ ನಕ್ಷತ್ರ ಮಂಡಿತವಾದ ಆಕಾಶವು ಆಸನ್ನ-ಅಭಿನಯ-ದೃಶ್ಯವನ್ನು ನೋಡುತ್ತಲಿತ್ತು.

ಗಡಿಯಾರವು ಟಂಗ ಟಂಗ ಎಂದು ಹನ್ನೆರಡು ಸಾರೆ ಬಾರಿಸಿತು. ಬೇರೆ ಬೇರೆ ಕಡೆಗಳಲ್ಲಿಯ ಜಾಂಗಟೆಗಳೂ ಬಾರಿಸತೊಡಗಿದವು. ಬಾಗಿಲ ತೆರೆದ 'ಖಟ್' ಎಂಬ ಸಪ್ಪಳವಾಯಿತು. ಪರಕ್ಷಣದಲ್ಲಿಯೇ ಚಂದ್ರಿಕೆಯು ರಾಜಮಾರ್ಗದ ಪಕ್ಕದಲ್ಲಿ ಬಂದು ನಿಂತಳು. ಬಾಗಿಲವು ಹಾಗೆಯೆ ತೆರೆಯಲ್ಪಟ್ಟಿದ್ದಿತು. ಚಂದ್ರಿಕೆಗೆ ಅದನ್ನು ಮುಂದೆ ಮಾಡಿಕೊಳ್ಳುವ ಅರಿವು ಇರಲಿಲ್ಲ!

ಸಮೀಪದಲ್ಲಿ ಮೋಟಾರ ಗಾಡಿಯು ಸಿದ್ಧವಾಗಿ ನಿಂತಿತ್ತು. ಚಂದ್ರಿಕೆಯು ರಾಜಮಾರ್ಗದ ಹತ್ತಿರ ಬರುತ್ತಲೆ ಅದು ಅವಳ ಬಳಿಯಲ್ಲಿ ಬಂದು ನಿಂತಿತು. ಮೋಟಾರ ಕಾರದಿಂದ ಒಬ್ಬನು ಚಂದ್ರಿಕೆಯ ತೀರ ಸಮೀಪಕ್ಕೆ ಬಂದನು.

ಚಂದ್ರಿಕೆಯು ಅಸ್ವಾಭಾವಿಕವಾಗಿ ತೀಕ್ಷ್ಣಸ್ವರದಿಂದ "ಯಾರು? ನೀವಾರು?" ಎಂದು ಚೀತ್ಕಾರ ಮಾಡಿದಳು.

"ನಾನು ಸ್ವಾಮಿರಾಯನು."

"ನನ್ನನ್ನು ಗಟ್ಟಿಯಾಗಿ ಹಿಡಿದುಕೊಳ್ಳಿರಿ! ಎತ್ತಿಕೊಂಡು ಹೋಗಿರಿ."

ಸ್ವಾಮಿರಾಯನು ಚಂದ್ರಿಕೆಯ ಕೈ ಹಿಡಿದು ಕರೆದೊಯ್ದು ಮೋಟಾರ ಬಂಡಿಯಲ್ಲಿ ಕುಳ್ಳಿರಿಸಿದನು. ಬಳಿಯಲ್ಲಿ ತಾನೂ ಕುಳಿತನು.

ಇಷ್ಟರಲ್ಲಿ ಒಂದು ಟಾಂಗೆಯು ಬಳಿಯಲ್ಲಿ ಬಂದು ನಿಂತಿತು. ಶಾಮನು ಟಾಂಗೆಯಿಂದ ಹಾರಿ ಮೋಟಾರ ಬಂಡಿಯ ಸಮೀಪಕ್ಕೆ ಬಂದು "ಚಂದ್ರಿಕೆ, ಚಂದ್ರಿಕೆ, ನಾನು ಬಂದಿರುವೆನು'' ಎಂದು ಕೂಗಿದನು.

ಮೋಟಾರ ಗಾಡಿಯು ಸುರು ಆಗುವದರಲ್ಲಿತ್ತು. ಸ್ವಾಮಿರಾಯನು ಶಾಮನನ್ನು ನೋಡಿ, "ರಾಯರೆ, ಅನುಕೂಲತೆ ನೋಡಿಕೊಂಡು ಭೆಟ್ಟಿಯಾಗಿರಿ. ನಿಮ್ಮೊಡನೆ ಮಾತನಾಡುವದಿದೆ'' ಎಂದು ಹೇಳಿದನು. ಮೋಟಾರವು ಭರದಿಂದ ಮುಂದೆ ಸಾಗಿತು.

ಸ್ವಾಮಿರಾಯನು ಮೋರೆದಿರುವಿ ನೋಡಿದನು. ಚಂದ್ರಿಕೆಯು ಅಚೇತನಳೂ ಸಂಜ್ಞಾಹೀನಳೂ ಆಗಿದ್ದು, ಬೀಳುವದರಲ್ಲಿದ್ದಳು. ಅವಳನ್ನು

ಚೆನ್ನಾಗಿ ಕುಳ್ಳಿರಿಸಿ, ಗಟ್ಟಿಯಾಗಿ ಹಿಡಿದುಕೊಂಡು, ಅವಳ ಕಿವಿಯ ಬಳಿಯಲ್ಲಿ ತನ್ನ ಮೋರೆಯನ್ನು ಒಯ್ದು:—"ಶಾಂತಳಾಗು, ಕಣ್ದೆರೆದು ನೋಡು" ಎಂದು ಹೇಳಿದನು.

ನಿಶೀತಕಾಲದ ತಂಗಾಳಿಯ ಸ್ಪರ್ಶನದಿಂದಲೂ ಪತಿಯ ಪ್ರೇಮಳ ವರ್ತನದಿಂದಲೂ ಚಂದ್ರಿಕೆಯು ಎಚ್ಚತ್ತಳು. ಮೆಲ್ಲಮೆಲ್ಲನೆ ಕಣ್ದೆರೆದು ನೋಡಿದಳು.

ಸ್ವಾಮಿರಾಯನು "ಭಯವಿಲ್ಲ ಶಾಂತಳಾಗು" ಎಂದು ಪುನಃ ಸಂತಯಿಸಿದನು.

ತುಸ ಹೊತ್ತಿನಲ್ಲಿಯೇ ಮೋಟಾರ ಗಾಡಿಯು ಒಂದು ಎರಡಂತಸ್ತಿನ ಮನೆಯ ಅಂಗಣದಲ್ಲಿ ಬಂದು ನಿಂತಿತು. ಚಂದ್ರಿಕೆಯು ಇದು ತಾನು ಮೊದಲಿದ್ದ ಮಾವನ ಮನೆಯುಲ್ಲವೆಂದು ಗುರತಿಸಿದಳು.

ಸುವಾಸಿನಿಯೊಬ್ಬಳು ಆಗಮಿಸಬಹುದಿದ್ದ ಜನರ ದಾರಿಯು ಕಾಯುತ್ತ ಒಳಬಾಗಿಲಲ್ಲಿ ನಿಂತಿದ್ದಳು. ಮೋಟಾರ ಗಾಡಿಯು ಬಂದು ನಿಲ್ಲುತ್ತಲೇ, ಅವಳು ಹೊರಬಿದ್ದು ಮೋಟಾರದ ಬಳಿಗೆ ಬಂದಳು ಸ್ವಾಮಿರಾಯನು ಅವಳನ್ನು ನೋಡಿ, 'ಅತ್ತೀ, ಇವಳನ್ನು ಒಳಗೆ ಕರೆದುಕೊಂಡು ಹೋಗು' ಎಂದು ಹೇಳಿದನು.

ಆ ಪ್ರೌಢ ಸ್ತ್ರೀಯು ಮೋಟಾರ ಬಂಡಿಯ ಬಾಗಿಲ ತೆರೆದು. ಚಂದ್ರಿಕೆಯನ್ನು ಅವಸರದಿಂದ ಕೆಳಗಿಳಿಸಿಕೊಂಡು, "ಮಗೂ, ನೀನು ನನ್ನನ್ನು ಗುರತಿಸಲಿಲ್ಲವೆ? ನೀನು ಅತ್ತೆಯಮನೆಯುಲ್ಲಿದ್ದಾಗ್ಗೆ ಒಮ್ಮೆ ನಾನು ಅಲ್ಲಿಗೆ ಬಂದಿದ್ದೆನು." ಎಂದು ಅಂದಳು. ಚಂದ್ರಿಕೆಯು ಅವಳನ್ನು ಗುರತಿಸಿ, ಅವಳ ಪಾದಗಳ ಮೇಲೆ ಬಿದ್ದಳು. ಆ ಪ್ರೌಢೆಯು ಆಶೀರ್ವದಿಸಿ, ಚಂದ್ರಿಕೆಯನ್ನು ಒಳಗೆ ಕರೆದೊಯ್ದಳು.

ತುಸ ಹೊತ್ತಿನಲ್ಲಿ ಸ್ವಾಮಿರಾಯನೂ ಒಳಗೆ ಹೋಗನು; ಮತ್ತು ಅತ್ತೆಯು ಚಂದ್ರಿಕೆಯನ್ನು ತನ್ನ ಹತ್ತರ ಕುಳ್ಳಿರಿಸಿಕೊಂಡಿರುವದನ್ನು ಕಂಡನು. ಸ್ವಾಮಿರಾಯನ ಅತ್ತೆಯು ಚಂದ್ರಿಕೆಯ ಬೆನ್ನ ಮೇಲೆ ಕೈಯಾಡಿಸಿ:— "ಮಗಳೇ, ನೀನು ಪರಮ ಸಾಧ್ವಿಯು, ಬಹು ತೇಜಸ್ವಿನಿಯು. ಅಂತೆಯೇ ಕಳೆದು ಹೋದ ಪತಿರತ್ನವನ್ನು ಪುನಃ ಪಡೆದೆ. ಸ್ವಾಮಿಯು ಇಂದು ಮಧ್ಯಾಹ್ನದಲ್ಲಿ ನಿನ್ನ ಪತ್ರವನ್ನೋದಿ ತೋರಿಸಿದನು. ನಿನ್ನ ಧರ್ಮ ವಿಶ್ವಾಸವನ್ನೂ, ದೃಢಮನಸ್ಸನ್ನೂ, ಧೈರ್ಯವನ್ನೂ ಅರಿತು, ಬೆರಗಾಗಿ ಹೋದೆನು. ನಮ್ಮವರು ಗ್ರಾಮವಾಸವನ್ನು ಬಿಟ್ಟು ಈ ನಗರದಲ್ಲಿ ಮನೆ

ಮಾಡಿದಂದಿನಿಂದಲೂ ನಾನು ನಿನ್ನನ್ನು ಕರೆಸಿ ನನ್ನ ಮನೆಯಲ್ಲಿಟ್ಟು ಕೊಳ್ಳುವ ಆಲೋಚನೆಯಲ್ಲಿದ್ದೆನು; ಆದರೆ ಕೆಲವು ಕಾರಣಗಳ ಮೂಲಕ ಹಾಗೆ ಮಾಡಲಿಕ್ಕೆ ಆಗಿರಲಿಲ್ಲ. ಇಂದು ಸ್ವಾಮಿಗೆ ನಾನೇ ಆಲೋಚನೆ ಹೇಳಿ, ನಿನ್ನನ್ನು ಬರಮಾಡಿಕೊಂಡಿದ್ದೇನೆ. ನನಗಾದರೂ ಮಕ್ಕಳು-ಮರಿ ಗಳಿಲ್ಲ. ನೀನೇ ನನ್ನ ಮಗಳೆಂದು ಭಾವಿಸಿದ್ದೇನೆ. ನೀನು ಬೇಕಾದಷ್ಟು ದಿವಸ ಇರಲಿಕ್ಕೆ ಅಡ್ಡಿಯಿಲ್ಲ. ಆದರಲ್ಲೂ ಸ್ವಾಮಿಯು ಅಣ್ಣನ ಕೋಪ ವನ್ನು ಶಾಂತಗೊಳಿಸುವವರೆಗಂತೂ ಇರಲೇಬೇಕು.'' ಎಂದು ಹೇಳಿದಳು. ಚಂದ್ರಿಕೆಯ ಕಣ್ಣುಗಳಿಂದ ಅಶ್ರುಗಳು ಝರಝರನೆ ಸುರಿಯಹತ್ತಿದವು. ಸ್ವಾಮಿರಾಯನ ನೇತ್ರಗಳೂ ಸಜಲವಾದವು.

÷ ÷ ÷ ÷ ÷ ÷

ಇತ್ತ ಶಾಮನು ಪರಮಲಜ್ಜಿತನಾಗಿ ತನ್ನ ಮನೆಯನ್ನು ಸೇರಿದನು. ಅವನ ಕಣ್ಣಮುಂದೆ ಝಗ್ಗನೆ ಒಂದು ಪ್ರಕಾಶವು ಹೊಳೆದಂತಾಯಿತು. ವಿದ್ಯುದ್ದೀಪಕ್ಕಿಂತಲೂ ಅದರ ಪ್ರಕಾಶವು ಬಲವಾಯಿತು! ವಿಚಾರ ಮಾಡಿ ನೋಡಿದನು. ಜ್ಞಾನಜ್ಯೋತಿಯೆಂದು ಸಂಶಯಬಂದಿತು. ಹೆಚ್ಚು ವಿಚಾರ ಮಾಡಿ ಸಂಶಯವನ್ನು ಪರಿಹರಿಸಿಕೊಂಡನು. ಅವನಿಗೆ ಆ ಜ್ಞಾನ ಜ್ಯೋತಿಯಲ್ಲಿ ಸುವರ್ಣಾಕ್ಷರಗಳಿಂದ ಕೊರೆದ ವಾಕ್ಯಗಳು ಕಾಣಿಸಿದವು. ಆ ವಾಕ್ಯಗಳು ಅವನಿಗೇ ಸಂಬಂಧಿಸಿದ್ದವಿದ್ದವು.

"ಶಾಮಾ, ದುಡ್ಡಿನ ಹೆಮ್ಮೆಯಿಂದ ಕುಲಸತಿಯನ್ನು ಕೆಡಿಸಲು ಪ್ರಯತ್ನಿಸಿದೆ; ಆದರೆ ಆ ಸತಿಯ ಪವಿತ್ರತೆಯ ಮುಂದೆ ನಿನ್ನ ಹೆಮ್ಮೆಯು ಥಿಮ್ಮೆಟ್ಟಿತು. ನೀನು ಅವಳ ಪವಿತ್ರತೆಯಿಂದ ಪರಾಜಿತನಾದೆ! ನೀನು ಪರಾಜಿತನಾದರೂ ನಿನಗೆ ಇದು ಭೂಷಣವಾಯಿತು. ಸತಿಯ ಪಾತಿವ್ರತ್ಯ ವನ್ನು ಹಾಳುಮಾಡಿ ನೀನು ಜಯಶಾಲಿಯಾಗಿದ್ದರೂ, ನೀನು ಸಮಾಜದಲ್ಲಿ ಪತಿತನಾಗುತ್ತಿದ್ದೆ; ದೇವರ ದರ್ಬಾರದಲ್ಲಿಯೂ ಪತಿತನೆನಿಸುತ್ತಿದ್ದೆ; ಆದರೆ ಇದರಲ್ಲಿ ನೀನು ಪರಾಜಿತನಾದ್ದರಿಂದ ನಿನ್ನ ಈ ಪರಾಜಯವು ಧನ್ಯವಾದ ದ್ದೆಂದೇ ಹೇಳಬಹುದು. ಈ ಪರಾಜಯದಿಂದ ನೀನು ಸಮಾಜದಲ್ಲಿ ಪತಿತ ನೆನಿಸಲಿಲ್ಲ; ದೇವರ ದರ್ಬಾರದಲ್ಲಿಯೂ ಪತಿತನಾಗಲಿಲ್ಲ. ಆದ್ದರಿಂದ ನಿನ್ನೀ ಪರಾಜಯಕ್ಕೆ "ಜಯ! ಪರಾಜಯ"ವೆಂದು ಹೊಗಳಬಹುದು. ಇಂಥ ಪರಾಜಯದ ಜಯಜಯಕಾರವನ್ನು ನಿನ್ನಂಥ ಸ್ವೇಚ್ಛಾಚಾರಿಗಳಾದ ತರು ಣರು ಪ್ರತಿನಿತ್ಯದಲ್ಲಿಯೂ ಮಾಡಲಿ! ಮತ್ತು ಇಂಥ ಪರಾಜಯವನ್ನು ಅವರು ಸರ್ವದಾ ಹೊಂದಲಿ!!!"

ಅಜ್ಞಾನಾಂಧಕಾರದಲ್ಲಿದ್ದ ಶಾಮನ [redacted]ಣ್ಣೊಳಗೆ ಸಿನೇಮಾದ ಚಿತ್ರಾಕ್ಷರಗಳಂತೆ ಆ ಸುವರ್ಣಾಕ್ಷರಗಳು ಕಾಣಿಸಲು ಅವನಿಗೆ ಬಹಳ ಪಶ್ಚಾತ್ತಾಪವಾಯಿತು. ಚಂದ್ರಿಕೆಯ ರೂಪಕ್ಕೆ ಮರುಳಾದ್ದರಿಂದ ತನ್ನಲ್ಲಿ ಇಂಥ ಅಪ್ರಬುದ್ಧ ವಿಚಾರಗಳುಂಟಾದವೆಂದೂ ಇದರಲ್ಲಿ ಪರಾಜಿತನಾದದ್ದೇ ತನಗೆ ಭೂಷಣವಾಯಿತೆಂದೂ ಅವನಿಗೆ ಅನಿಸಿ, ಒಂದು ಬಗೆಯಿಂದ ಸಮಾಧಾನ ತಾಳಿದನು.

ಪಶ್ಚಾತ್ತಾಪದಿಂದ ದಗ್ಧಪಾಪನಾದ ಶಾಮನ ಅಂತಃಕರಣವು ನಿರ್ಮಲವಾಯಿತು. ಆ ನಿರ್ಮಲಾಂತಃಕರಣದಲ್ಲಿ ಸತಿಯ ಕ್ಷಮೆ ಬೇಡಬೇಕೆಂಬ ವಿಚಾರವೂ ಒಡಮೂಡಿತು; ಆದರೆ ಚಂದ್ರಿಕೆಯ ಎದುರಿಗೆ ಹೋಗಿ ತನ್ನ ಪಾಪಿ ಮುಖವನ್ನು ತೋರಿಸಲು ಅವನಿಗೆ ಧೈರ್ಯವು ಸಾಲದಾಯಿತು; ಆದರೂ ಅವನು ಸ್ವಾಮಿರಾಯನ ಬಳಿಗೆ ಹೋಗಿ ತನ್ನ ಕಥೆಯನ್ನು ಅವನಿಗೆ ಒಂದೂ ಉಳಿಯದಂತೆ ಹೇಳಿ ಕ್ಷಮೆಯನ್ನು ಯಾಚಿಸಿದನು. ಉದಾರ ಮನಸ್ಸಿನ ಸ್ವಾಮಿರಾಯನು ಆತನ ಅನುತಾಪವನ್ನು ತಿಳಿದು, ಇಂಥ ಅನುಚಿತ ಕಾರ್ಯಕ್ಕೆ ಕೈ ಹಾಕುವದು ಉಚಿತವಲ್ಲೆಂದು ಬುದ್ಧಿಯ ಮಾತುಗಳಿನ್ನು ಹೇಳಿ ಕಳಿಸಿದನು.

ಶಾಮರಾಯನು ಹೇಳಿದ ಸಂಗತಿಗಳಿಂದ ಸ್ವಾಮಿರಾಯನು ಚಂದ್ರಿಕೆಯ ಸದ್ಗುಣಗಳನ್ನು ಬಹಳವಾಗಿ ಕೊಂಡಾಡಿದನು; ಮತ್ತು ಆಕೆಯನ್ನು ಮೊದಲಿಗಿಂತಲೂ ವಿಶೇಷವಾಗಿ ಪ್ರೀತಿಸತೊಡಗಿದನು.

ಂ ಂ ಂ

ಇಂದಿಗೆ ಚಂದ್ರಿಕೆಯು ಸಂಸಾರದಲ್ಲಿ ಪೂರ್ಣ ಸುಖಿಯಾಗಿರುವಳು. ಮುದ್ದು ಮಗನನ್ನು ಮುದ್ದಿಡುತ್ತ, ಪತಿಯೊಡನೆ ಸರಸ ಸಲ್ಲಾಪಗಳನ್ನಾಡುತ್ತ ಸುಖದಿಂದ ಕಾಲ ಕ್ರಮಿಸುತ್ತಿರುವಳು; ಹಾಗು ಶೀಲವತಿಯರಾದ ಪ್ರಮದೆಯರ ಬಯಕೆಯು ವ್ಯರ್ಥವಾಗದೆಂಬ ಮಾತನ್ನು ಜಗತ್ತಿನ ನಿದರ್ಶನಕ್ಕೆ ತಂದು ಕೊಡುತ್ತಲಿರುವಳು!!

